ಶ್ರೀ ರಾಘವೇಂದ್ರ ತೀರ್ಥಯತಿ ವಿರಚಿತ

# ಪ್ರಾತಃಸಂಕಲ್ಪಗದ್ಯ



ಅನುವಾದ

ಮಾ॥ ಶಾ॥ ಸಂ॥ ಎಲ್.ಎಸ್. ಬ್ರಹ್ಮಣ್ಯತೀರ್ಥಾಚಾರ್ಯ

ಶ್ರೀ ರಾಘವೇಂದ್ರ ತೀರ್ಥಯತಿ ವಿರಚಿತ

# ಪ್ರಾತಃಸಂಕಲ್ಪಗದ್ಯ

ಅನುವಾದ

**ಮಾ|| ಶಾ|| ಸಂ|| ಎಲ್.ಎಸ್. ಬ್ರಹ್ಮಣ್ಯತೀರ್ಥಾಚಾರ್ಯ**

ಪ್ರಕಾಶಕರು

**ಶ್ರೀ ಗುರುರಾಜ ಅಸೋಸಿಯೇಷನ್ (ರಿ.)**

ನಂ.53, ಮಾಡಲ್ ಹೌಸ್ ಬೀದಿ, ಬಸವನಗುಡಿ,

ಬೆಂಗಳೂರು-560 004.

ಶ್ರೀ ರಾಘವೇಂದ್ರ ತೀರ್ಥಯತಿ ವಿರಚಿತ ಪ್ರಾತಃಸಂಕಲ್ಪಗದ್ಯ

ಅನುವಾದ :
ಮಾ॥ ಶಾ॥ ಸಂ॥ ಎಲ್.ಎಸ್. ಬ್ರಹ್ಮಣ್ಯತೀರ್ಥಾಚಾರ್ಯ

ಪ್ರಕಾಶಕರು :
ಶ್ರೀಗುರುರಾಜ ಅಸೋಸಿಯೇಷನ್ (ರಿ.)
ಮಾಡೆಲ್ ಹೌಸ್ ಬೀದಿ, ಬಸವನಗುಡಿ,
ಬೆಂಗಳೂರು-೫೬೦ ೦೦೪.
ದೂರವಾಣಿ : ೨೬೬೨೫೬೫೮/೫೯



ಪ್ರತಿ : ೧೦೦೦

ಬೆಲೆ : ರೂ.೧೦/-

ಅಕ್ಷರವಿನ್ಯಾಸ ಮತ್ತು ಮುದ್ರಣ
ವಾಗರ್ಥ
ನಂ.೧೪೯, ೮ನೇ ಅಡ್ಡರಸ್ತೆ, ನರಸಿಂಹರಾಜಾ ಕಾಲೋನಿ, ಬೆಂಗಳೂರು-೧೯.

**H.H. Sri Vishvesha Tirtha Swamiji**
Sri Pejavara Adhokshaja Matha
Jagadguru Sri Madhwacharya Maha Samsthana
Udupi - 576 101, Karnataka
Phone : 0820-2524198, 2526598

**श्री श्री विश्वेशतीर्थश्रीपादाः**
श्री पेजावराधोक्षज मठः
जगद्गुरु श्रीमध्वाचार्यमहासंस्थानम्
उडुपि - ५७६ १०१, कर्णाटक

Date : 01-08-2009

# ಸಂದೇಶ

ಶ್ರೀ ರಾಘವೇಂದ್ರ ಗುರುಗಳು ರಚಿಸಿದ ಗ್ರಂಥಗಳಲ್ಲಿ ಪ್ರಾತಃಸಂಕಲ್ಪಗದ್ಯವು ಒಂದು ಅಪೂರ್ವವೂ ಅದ್ಭುತವೂ ಆದ ಗ್ರಂಥವಾಗಿದೆ. ಈ ಚಿಕ್ಕ ಗ್ರಂಥದಲ್ಲಿ ಮಧ್ವಸಿದ್ಧಾಂತದ ಎಲ್ಲಾ ಪ್ರಮೇಯಗಳು ಅಡಕವಾಗಿವೆ. ಇದು ಹರಿವಾಯುಗಳ ಮಹಿಮೆಯೆಲ್ಲವನ್ನು ಸಂಗ್ರಹಿಸಿ ರಚಿಸಿದ ಸ್ತುತಿಯಾಗಿರುವುದರ ಜೊತೆಗೆ ನಾವು ಬೆಳಗ್ಗಿನಿಂದ ಸಂಜೆಯವರೆಗೆ ಮಾಡುವ ಎಲ್ಲಾ ಕಾರ್ಯಗಳ ಹಿನ್ನಲೆಯಲ್ಲಿ ಯಾವರೀತಿಯ ಅನುಸಂಧಾನವಿರಬೇಕೆಂಬುದನ್ನೂ ತಿಳಿಸಿ ಕೊಡುತ್ತದೆ. ಹರಿವಾಯುಗಳ ವಿಶೇಷ ಮಹಿಮೆಯನ್ನು ತಿಳಿದು ಅವರ ಭಕ್ತರಾಗಿ 'ಇದು ನನ್ನದು, ಇದನ್ನು ನಾನೇ ಮಾಡಿದ್ದೇನೆ' ಎಂಬ ಸ್ವಾತಂತ್ರ್ಯ ಭ್ರಮೆ ಮತ್ತು ಅಹಂಕಾರವನ್ನು ತೊರೆದು, ಯಾವುದೇ ಸ್ವಾರ್ಥವನ್ನು ಆಶಿಸದೆ ಭಗವಂತನು ಸುಪ್ರೀತನಾಗಲಿ ಎಂಬ ಒಂದೇ ಉದ್ದೇಶದಿಂದ ನಾವು ಕರ್ತವ್ಯವನ್ನು ಮಾಡಬೇಕೆಂಬುದೇ ಈ ಕೃತಿಯ ಸಾರ ಸಂದೇಶ. ಭಗವದ್ಭಕ್ತಿಯ ಹಿನ್ನಲೆಯಲ್ಲಿ ನಿಃಸ್ವಾರ್ಥತೆ, ನಿರಹಂಕಾರದಿಂದ ಕರ್ತವ್ಯವನ್ನು ನೆರವೇರಿಸುವ ಧೀರ ಸಂಕಲ್ಪವನ್ನು ಪ್ರತಿದಿನವೂ ನಾವು ಮಾಡಬೇಕೆನ್ನುವ ಸಾತ್ವಿಕ-ಉತ್ಸಾಹವನ್ನು ಈ ಗ್ರಂಥವು ನಮ್ಮಲ್ಲಿ ಮೂಡಿಸುತ್ತದೆ. ನಿರಂತರ ಜ್ಞಾನಯಜ್ಞದಲ್ಲಿ ದೀಕ್ಷಿತರಾದ, ನಮ್ಮ ಪ್ರೀತಿಪಾತ್ರರಾದ ಶ್ರೀ ಬ್ರಹ್ಮಣ್ಯಾಚಾರ್ಯರು ಈ ಗ್ರಂಥದ ಅನುವಾದವನ್ನು ಮಾಡಿ, ಪ್ರಕಟಿಸಿ, ಸಜ್ಜನರಿಗೆ ಮಹೋಪಕಾರವನ್ನು ಮಾಡುತ್ತಿದ್ದಾರೆ. ರಾಯರ ಆರಾಧನೆಯ ಸಮಯದಲ್ಲಿ ಅವರಿಗೆ ಸಮರ್ಪಿತವಾಗುತ್ತಿರುವ ಈ ಸುವರ್ಣಮಾಲೆಯನ್ನು ರಾಯರು ಸ್ವೀಕರಿಸಿ ಇವರನ್ನೂ, ಓದುಗರನ್ನೂ ವಿಶೇಷವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು.

# ಮೊದಲಮಾತು

ಭಾಷ್ಯ-ಟೀಕಾ-ಟಿಪ್ಪಣಿಯೇ ಮೊದಲಾಗಿ ಎಲ್ಲ ಪ್ರಕಾರಗಳಿಂದಲೂ ಆಚಾರ್ಯರ ಸತ್‌ಸಿದ್ಧಾಂತವನ್ನು ತಮ್ಮ ಅಸದೃಶವಾದ ಗ್ರಂಥಗಳ ಜಾಲದಿಂದ ಸಿದ್ಧಾಂತದ ವೃಕ್ಷವು ಫಲಭರಿತವಾಗುವಂತೆ ಮಾಡಿದ ಮಹಾನುಭಾವರು ಮಂತ್ರಾಲಯದ ಮಹನೀಯ ಮಹಿಮಾನ್ವಿತರಾದ ಶ್ರೀ ರಾಘವೇಂದ್ರ ಮಹಾಸ್ವಾಮಿಗಳು. ಶ್ರೀ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಅಶೇಷ ಸಜ್ಜನ ಸಮುದಾಯಕ್ಕೆ ಆಚಾರ್ಯರ ಸತ್ಸಿದ್ಧಾಂತದ ಸವಿರುಚಿಯನ್ನು ತಮ್ಮ ಪರಿಮಳಾದಿ ಗ್ರಂಥಗಳಿಂದ ಉಣಬಡಿಸಿದವರು. ಅವರ ನಾಲಿಗೆಯು ವಾಗ್ದೇವಿಯ ನಾಟ್ಯದ ರಂಗಸ್ಥಳವೇ ಆಗಿತ್ತು. ಅವರ ಗ್ರಂಥಗಳ ಬಗ್ಗೆ ತಿಳಿಸುವ ಸಂದರ್ಭದಲ್ಲಿ ಶ್ರೀವಾದೀಂದ್ರ ಶ್ರೀಮಚ್ಚರಣರು -

**ಚಿತ್ತೇನಾಯುಕ್ತಮರ್ಥಂ ಕಲಯತಿ ಸಹಸಾ ನಾಭಿಧತ್ತೇ ನಸದ್ಭಿ-**
**ಸ್ಸಾಕಂ ಮೀಮಾಂಸತೇ ವಾ ನ ಲಿಖತಿ ವಚಸೋದ್ಘಾಟಯತ್ಯಾಶಯಂ ಸ್ವಮ್ ।**
**ಉಕ್ತಂ ನೋ ವಕ್ತಿ ಭೂಯಃ ಕ್ವಚಿದಪಿ ಲಿಖಿತಂ ನೈವ ನಿರ್ಮಾರ್ಷ್ಟಿ ತಸ್ಮಾ-**
**ದಸ್ಮಾಭಿಸ್ತತ್ಪ್ರಬಂಧಪ್ರಣಯನವಿಷಯೇ ಸ್ತೂಯತೇ ರಾಘವೇಂದ್ರಃ ॥**

ಎಂಬುದಾಗಿ ತಿಳಿಸುತ್ತಾ, ಶ್ರೀಮಂತ್ರಾಲಯ ಮಹನೀಯರು ತಮ್ಮ ಮನದಲ್ಲಿ ಎಂದು ಅಯುಕ್ತವಾದ ಅರ್ಥವನ್ನು ಚಿಂತಿಸಿದವರಲ್ಲ. ಸಜ್ಜನರೊಂದಿಗೆ ಎಂದಿಗೂ ವಿವಾದ ಮಾಡದ ಮಹನೀಯರು. ಅಯುಕ್ತವಾದ ಅರ್ಥವನ್ನು ಗ್ರಂಥದಲ್ಲಿ ಎಂದಿಗೂ ಬರೆದವರಲ್ಲ ತಮ್ಮ ಅಭಿಪ್ರಾಯವನ್ನು ಎಂದಿಗೂ ಒಪ್ಪುವಂತೆ ಶ್ರೀಗುರುರಾಜರು ಯಾರಿಗೂ ಆಗ್ರಹ ಮಾಡಿದವರಲ್ಲ, ಹೇಳಿದ್ದನ್ನು ಮತ್ತೆ ಹೇಳುವರಲ್ಲ, ಬರೆದದ್ದನ್ನು ಅಳಿಸುವವರಲ್ಲ. ಗ್ರಂಥಕಾರರಿಗೆ ಇರಬೇಕಾದ ಸಕಲಗುಣದಿಂದ ಅವರು ಭರಿತರಾಗಿದ್ದವರು. ಆದಕಾರಣ ಗ್ರಂಥರಚನಾಕಾಲದಲ್ಲಿ ಆ ಮಹನೀಯರನ್ನು ನಾನು ಸ್ಮರಿಸುತ್ತೇವೆ ಎಂದು

ವಾದೀಂದ್ರತೀರ್ಥರು ತಮ್ಮ ಗುರುಗಳಾದ ಶ್ರೀರಾಘವೇಂದ್ರ ಸ್ವಾಮಿಗಳನ್ನು ಬಣ್ಣಿಸುತ್ತಾರೆ.

ಪ್ರಸ್ತುತ ಪ್ರಾತಃಸಂಕಲ್ಪಗದ್ಯ ಅವರ ಗ್ರಂಥ ಜಾಲದಲ್ಲಿ ಎರಡು ಗದ್ಯಗಳಲ್ಲಿ ಒಂದಾಗಿದೆ. ಒಂದು ಪ್ರಾತಃ ಸಂಕಲ್ಪ ಗದ್ಯ ಮತ್ತೊಂದು ಸರ್ವ ಸಮರ್ಪಣ ಗದ್ಯ ಸಂಕಲ್ಪ ಹಾಗೂ ಸಮರ್ಪಣೆ ಸಾಧಕ ಸಜ್ಜನನಿಗೆ ಎಷ್ಟು ಮುಖ್ಯ ಎಂಬುದನ್ನು ಅರಿತು ಈ ಎರಡು ಗ್ರಂಥಗಳನ್ನು ಮಹಾಸ್ವಾಮಿಗಳವರು ರಚಿಸಿ ಸಜ್ಜನ ಸಮುದಾಯಕ್ಕೆ ಮಹತ್ತರವಾದ ಉಪಕಾರವನ್ನೇ ಮಾಡಿರುತ್ತಾರೆ.

ಸಾಧಕನು ಮಾಡುವ ಪ್ರತಿಕರ್ಮ ಹರಿಯ ಪೂಜೆ ಆಗಬೇಕು.ಹಾಗೆ ಆಗಬೇಕಾದರೆ ಅದಕ್ಕೆ ಮೂರು ಅಂಶಗಳು ಬಹಳ ಮುಖ್ಯವಾಗಿದೆ. (1) ಸಂಕಲ್ಪ (2) ಸ್ಮರಣೆ (3) ಸಮರ್ಪಣೆ. ಪ್ರತಿಕರ್ಮದ ಆರಂಭದಲ್ಲಿ ಜೀವರ ಅಂತರ್ಯಾಮಿಗಳಾದ ತತ್ತ್ವಾಭಿಮಾನಿಗಳ ಅಂತರ್ಯಾಮಿಯಾದ ವಾಯುದೇವರ ಒಳಗಿರುವ ಹರಿಯ ಪ್ರೇರಣೆಯಿಂದ ಅವನು ಮಾಡಿಸಿದಂತೆ ನಾನು ಮಾಡುತ್ತೇನೆ. ಎಂಬುದೇ ಸಂಕಲ್ಪವಾದರೆ, ಕರ್ಮ ಮಾಡುವಾಗ ಮೇಲಿಂದ ಮೇಲೆ ಆ ಭಗವಂತನ ಗುಣವಾಚಕ ನಾಮಸ್ಮರಣೆ ಮಾಡಿ ಕರ್ಮವನ್ನು ಪವಿತ್ರಗೊಳಿಸುವುದೇ ಸ್ಮರಣೆ ಹಾಗೂ ಮಾಡಿದ ಸಕಲ ಕರ್ಮಗಳು ಅವನ ಪ್ರೇರಣೆಯಿಂದಲೇ ಆಗಿವೆ. ಅದು ಆತನ ಪ್ರೀತಿಗಾಗಿಯೇ ಮಾಡಿದ್ದೇನೆ ಎಂದು ಅರಿತು ಆ ಎಲ್ಲ ಕರ್ಮಗಳನ್ನು ಹರಿಗೆ ಅರ್ಪಿಸುವುದೇ ಸಮರ್ಪಣೆಯಾಗಿದೆ.

ಪ್ರಸ್ತುತ ಈ ಪ್ರಾತಃಸಂಕಲ್ಪಗದ್ಯದಲ್ಲಿ ಜೀವನು ಸಕಲ ಕರ್ಮಗಳ ಆರಂಭದಲ್ಲಿ ಅನುಸಂಧಾನ ಪುರಃಸ್ಸರವಾಗಿ ಮಾಡಲೇಬೇಕಾದ ಸಂಕಲ್ಪವನ್ನು ಹರಿಯ ಮಹದನುಗ್ರಹಕ್ಕೆ ಪಾತ್ರರಾದ ಪ್ರಹ್ಲಾದಾಂಶರಾದ ಶ್ರೀ ಮಂತ್ರಾಲಯದ ಮಾಂತ್ರಿಕರಾದ ಶ್ರೀ ರಾಘವೇಂದ್ರಗುರುಸಾರ್ವಭೌಮರು ಈ ಗ್ರಂಥದಲ್ಲಿ ವಿಶೇಷವಾಗಿ ತಿಳಿಸಿದ್ದಾರೆ.

ಮಂದಮತಿಯಾದ ನಾನು ಶ್ರೀಗುರು ಸಾರ್ವಭೌಮರ ಸೇವಾಫಲ-ರೂಪವಾಗಿ ಯಥಾಶಕ್ತಿ ಯಥಾಮತಿ ಈ ಗ್ರಂಥವನ್ನು ಕನ್ನಡೀಕರಿಸುವ ಪ್ರಯತ್ನ ಮಾಡಿದ್ದೇನೆ. **''ತವ ಸಂಕೀರ್ತನಂ ವೇದಶಾಸ್ತ್ರಾರ್ಥ ಜ್ಞಾನಸಿದ್ಧಯೇ.....''** ಎಂಬ ಅಪ್ಪಣ್ಣಾಚಾರ್ಯ ಮಾತುಗಳೇ ನನ್ನ ಪ್ರಯತ್ನದ ಸ್ಫೂರ್ತಿ. **ಬಾಲಕನ ಕಲಬಾಷೆಯನು ಕೇಳಿ ಜನನಿಯು ಸುಖಪಡುವಂತೆ**......ಎಂಬ ಶ್ರೀ ಜಗನ್ನಾಥ ದಾಸಾರ್ಯರ ವಾಣಿಯಂತೆ. ಶ್ರೀಗುರುರಾಜರು ಬಾಲಕನಾದ ನನ್ನ ಈ ಕೃತಿಯನ್ನು ಸ್ವೀಕರಿಸಿ ಹೆಚ್ಚಿನ ಜ್ಞಾನವನ್ನು ನೀಡಿ ಅವರ ಪಾದಾರವಿಂದಗಳಲ್ಲಿ ಸದ್ಭಕ್ತಿಯನ್ನು ಕೊಟ್ಟು ಹರಸಲಿ ಎಂದು ಅವರ ಪಾದಗಳಿಗೆ ಈ ಕೃತಿಯನ್ನು ಅರ್ಪಿಸುತ್ತೇನೆ.

ನನ್ನ ಈ ಕೃತಿಯನ್ನು ನೋಡಿ ಹರಿಸಿ ತಮ್ಮ ಅಮೂಲ್ಯವಾದ ಆಶೀರ್ವಚನವನ್ನು ನೀಡಿ ಹಾರೈಸಿದ ಪರಮ ಪೂಜ್ಯ ಶ್ರೀ ಶ್ರೀ ೧೦೦೮ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶ ತೀರ್ಥರಿಗೂ ನನ್ನ ಅನಂತಾನಂತ ಶಿರಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಶ್ರೀ ಗುರುರಾಜ ಅಸೋಸಿಯೇಷನ್ ಇಲ್ಲಿನ ಎಲ್ಲ ಪದಾಧಿಕಾರಿಗಳು ಶ್ರೀ ಗುರುರಾಜರ ಆರಾಧನಾ ಮಹೋತ್ಸವ ಸೇವಾ ಕಾರ್ಯಗಳಲ್ಲಿ ತಮ್ಮನ್ನು ವಿಶಿಷ್ಠರೀತಿಯಿಂದ ತೊಡಗಿಸಿಕೊಂಡು ಜ್ಞಾನ ಪ್ರಸಾರದ ಮೂಲಕ ಶ್ರೀ ಗುರುರಾಜರ ಸೇವೆಯನ್ನು ಪ್ರತಿವರ್ಷ ಮಾಡುವಂತೆ ಈ ಬಾರಿಯು ಅವರು ಈ ಕೃತಿಯನ್ನು ಪ್ರಕಾಶಿಸಿ ನನ್ನನ್ನು ಪ್ರೋತ್ಸಾಹಿಸಿದ್ದಾರೆ. ಕೃತಿ ಹೊರ ಬರಲು ಸರ್ವರೀತಿಯಿಂದ ಕಾರಣರಾದ ಅಸೋಸಿಯೇಷನ್ನಿನ ಸರ್ವ ಸದಸ್ಯರು ಹಾಗೂ ಎಲ್ಲ ಪದಾಧಿಕಾರಿಗಳಿಗೂ ಶ್ರೀ ಗುರುರಾಜರು ಆಯುರಾರೋಗ್ಯವನ್ನು ಕರುಣಿಸಲಿ ಎಂದು ಗುರುಗಳಲ್ಲಿ ಪ್ರಾರ್ಥಿಸುತ್ತೇನೆ. ಹಾಗೂ ಈ ಕೃತಿ ಹೊರಬರಲು ತಮ್ಮ ತನು-ಮನ-ಧನವಿತ್ತು ಪ್ರೋತ್ಸಾಹಿಸಿದ ಚೈತ್ರ ಶ್ರೀರಾಘವೇಂದ್ರರಾಯರ ಕುಟುಂಬ ವರ್ಗದ ಎಲ್ಲರನ್ನು ಶ್ರೀರಾಯರು ಹರಸಲಿ.

ಈ ಕೃತಿಯನ್ನು ಪೂಜ್ಯ ನನ್ನ ಮಾತಾಪಿತೃಗಳಾದ ಶ್ರೀಮತಿ ಅನುಸೂಯಮ್ಮ ಹಾಗೂ ಶ್ರೀ ಸತ್ಯನಾರಾಯಣ ರಾವ್ ಇವರುಗಳಿಗೆ ಅರ್ಪಿಸಿ ಈ ಕೃತಿಯನ್ನು ಸಜ್ಜನರು ಸ್ವೀಕರಿಸಿ ಹರಸಲಿ ಎಂಬುದಾಗಿ ಪ್ರಾರ್ಥಿಸುತ್ತೇನೆ.

ಈ ಕೃತಿಯು ಮುದ್ರಣವನ್ನು ಅಚ್ಚುಕಟ್ಟಾಗಿ ಮಾಡಿ ಕೊಟ್ಟ ವಾಗರ್ಥ ಮುದ್ರಣದ ಎಲ್ಲರಿಗೂ ಶ್ರೀಗುರುರಾಜರು ಹಾರೈಸಲಿ.

೦೪-೦೮-೨೦೦೯ ಎಲ್.ಎಸ್. ಬ್ರಹ್ಮಣ್ಯತೀರ್ಥಾಚಾರ್

ಬೆಂಗಳೂರು

# ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಮ್
# ಪ್ರಾತಃಸಂಕಲ್ಪಗದ್ಯಮ್

ಶ್ರೀ ಗುರುಭ್ಯೋ ನಮಃ ॥ ಹರಿಃ ಓಮ್ ॥

ಲೌಕಿಕವೈದಿಕಭೇದಭಿನ್ನ ವರ್ಣಾತ್ಮಕ ಧ್ವನ್ಯಾತ್ಮಕಾಶೇಷಶಬ್ದಾರ್ಥ ಋಗಾದಿಸರ್ವವೇದಾರ್ಥ ವಿಷ್ಣುಮಂತ್ರಾರ್ಥ ಪುರುಷಸೂಕ್ತಾರ್ಥ ಗಾಯತ್ರ್ಯರ್ಥ ವಾಸುದೇವದ್ವಾದಶಾಕ್ಷರಮಂತ್ರಾಂತರ್ಗತ ಆದ್ಯ-ಷ್ಟಾಕ್ಷರಾರ್ಥ ಶ್ರೀಮನ್ನಾರಾಯಣಾಷ್ಟಾಕ್ಷರಮಂತ್ರಾರ್ಥ ವಾಸುದೇವ ದ್ವಾದಶಾಕ್ಷರಮಂತ್ರಾಂತರ್ಗತ ಅಂತ್ಯಚತುರಕ್ಷರಾರ್ಥ ವ್ಯಾಹೃತ್ಯರ್ಥ ಮಾತೃಕಾಮಂತ್ರಾರ್ಥ ಪ್ರಣೋಪಾಸಕಾನಾಂ ಪಾಪಾವಿದ್ಧ ದೈತ್ಯಪೂಗಾವಿದ್ಧ ಶ್ರೀವಿಷ್ಣುಭಕ್ತ್ಯಾದ್ಯನಂತಗುಣಪರಿಪೂರ್ಣ ರಮಾವ್ಯತಿರಿಕ್ತ ಪೂರ್ವ-ಪ್ರಸಿದ್ಧವ್ಯತಿರಿಕ್ತಾನಂತವೇದಪ್ರತಿಪಾದ್ಯ ಮುಖ್ಯತಮಾನಂತಜೀವ-ನಿಯಮಕಾನಂತರೂಪ ಭಗವತ್ಕಾರ್ಯಸಾಧಕ ಪರಮದಯಾಳು ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣು ಶ್ರೀಮುಖ್ಯಪ್ರಾಣಾವ-ತಾರಭೂತಾನಾಂ ಅಜ್ಞ ಜ್ಞಾನಾರ್ಥಿ ಜ್ಞಾನಯೋಗ್ಯ ಭಗವತ್ಕೃಪಾಪಾತ್ರ-ಭೂತ ಸಲ್ಲೋಕಕೃಪಾಳು ಬ್ರಹ್ಮರುದ್ರಾದ್ಯರ್ಥಿತ ಭಗವದಾಜ್ಞಾಂ ಶಿರಸಿ ಪರಮಾದರೇಣಾನರ್ಘ್ಯಶಿರೋರತ್ನವನ್ನಿಧಾಯ ತಥಾಶೇಷ-ದೇವತಾಪ್ರಾರ್ಥನಾಂ ಹಾರವದ್ ಹೃದಿ ನಿಧಾಯ ಸರ್ವಸ್ವೀಯ-ಸಜ್ಜನಾನುಗ್ರಹೇಚ್ಛಯಾ ಕರ್ಮಭುವ್ಯವತೀರ್ಣಾನಾಂ ತಥಾವತೀರ್ಯ ಸಕಲಸಚ್ಛಾಸ್ತ್ರಕರ್ತೄಣಾಂ ಸಕಲದುರ್ಮತಭಂಜಕಾನಾಂ ಅನಾದಿತಃ ಸತ್ಸಂಪ್ರದಾಯಪರಂಪರಾಪ್ರಾಪ್ತ ಶ್ರೀಮದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪಕಾನಾಂ ಅತ ಏವ ಭಗವತ್ಪರಮಾನುಗ್ರಹಪಾತ್ರಭೂತಾನಾಂ ಸರ್ವದಾ ಭಗವ-ದಾಜ್ಞಯಾ ಭಗವತ್ಸನ್ನಿಧೌ ಪೂಜ್ಯಾನಾಂ ತಥಾ ಭಗವತಾದತ್ತವರಾಣಾಂ

ದ್ವಾತ್ರಿಂಶಲ್ಲಕ್ಷಣೋಪೇತಾನಾಂ, ತಥಾ ಸಮಗ್ರಗುರುಲಕ್ಷಣೋ-
ಪೇತಾನಾಂ ಅಸಂಶಯಾನಾಂ, ಪ್ರಸಾದಮಾತ್ರೇಣ ಸ್ವಭಕ್ತಾಶೇಷ-
ಸಂಶಯಚ್ಛೇತ್ತೄಣಾಂ, ಪ್ರಣವಾದ್ಯಶೇಷವೈಷ್ಣವಮಂತ್ರೋದ್ಧಾರಕಾಣಾಂ,
ಸರ್ವದಾ ಸರ್ವವೈಷ್ಣವಮಂತ್ರಜಾಪಕಾನಾಂ, ಸಂಸಿದ್ಧಸಪ್ತಕೋಟಿಮಹಾ-
ಮಂತ್ರಾಣಾಂ, ಭಗವತಿ ಭಕ್ತ್ಯತಿಶಯೇನ ಭಗವದುಪಾಸನಾರ್ಥಂ,
ಸ್ವೇಚ್ಛಯಾ ಗೃಹೀತ ರೂಪಾಣಾಂ ತತ್ರ ತತ್ರ ಪೃಥಕ್ ಪೃಥಕ್ ಭಗವತ್-
ಅನಂತರೂಪೇಷು ಪೃಥಕ್ ಪೃಥಗ್ವೇದೋಕ್ತ ತದನುಕ್ತಭಾರತೋಕ್ತ
ತದನುಕ್ತ ಸಂಪ್ರದಾಯಾಗತ ಸ್ವೇತರ ಸಾಭಿನ್ನ ತಯಾಶೇಷಶಕ್ತಿ-
ವಿಶೇಷಾಭ್ಯಾಂ ಪೃಥಗ್ವ್ಯವಹಾರವಿಷಯ ಸರ್ವಸಾಮರ್ಥ್ಯೋಪೇತ
ನಿರವಧಿಕಾನಂತಾನವದ್ಯಕಲ್ಯಾಣಗುಣ ಪರಿಪೂರ್ಣಾನಂತ ಗುಣೋಪ-
ಸಂಹರ್ತ್ೄಣಾಂ, ತಥಾ ವೇದೋಕ್ತ ಸರ್ವಕ್ರಿಯೋಪಸಂಹರ್ತ್ೄಣಾಂ, ಏವಂ
ಅನಂತರೂಪಾವಯವಗುಣಕ್ರಿಯಾಜಾತ್ಯವಸ್ಥಾವಿಶಿಷ್ಟ ಭಗವದು-
ಪಾಸಕಾನಾಂ, ಪರಮದಯಾಳೂನಾಂ, ಕ್ಷಮಾಸಮುದ್ರಾಣಾಂ
ಭಕ್ತವತ್ಸಲಾನಾಂ, ಭಕ್ತಾಪರಾಧಸಹಿಷ್ಣೂನಾಂ ಸ್ವಭಕ್ತಾನ್ ದುರ್ಮಾ-
ರ್ಗಾದುದ್ಧೃತ್ಯ ಸನ್ಮಾರ್ಗಸ್ಥಾಪಕಾನಾಂ, ಸ್ವಭಕ್ತಂ ಮಾಮುದ್ದಿಶ್ಯ ಭಗವತಃ ಪುರಃ
ಪರಮದಯಾಲೋ ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣೋ
ತ್ವದಧೀನಂ, ದೀನಂ ದೂನಂ ಅನಾಥಂ ಶರಣಾಗತಮೇನಮುದ್ಧರೇತಿ
ವಿಜ್ಞಾಪನಕರ್ತ್ೄಣಾಂ, ಸರ್ವಜ್ಞಶಿರೋಮಣೀನಾಂ, ಅಶೇಷಗುರ್ವಂತ-
ರ್ಯಾಮಿಣಾಂ ಸದಾಭಗವತ್ಪರಾಣಾಂ ಭಗವತೋಽನ್ಯತ್ರ ಸರ್ವವಸ್ತುಷು
ಮನಃಸಂಗರಹಿತಾನಾಂ ಸರ್ವತ್ರ ಸರ್ವದಾ ಸರ್ವಾಕಾರ ಸರ್ವಾಧಾರ
ಸರ್ವಾಶ್ರಯ ಸರ್ವೋತ್ಪಾದಕ ಸರ್ವಪಾಲಕ ಸರ್ವಸಂಹಾರಕ
ಸರ್ವನಿಯಾಮಕ ಸರ್ವಪ್ರೇರಕ ಸರ್ವಪ್ರವರ್ತಕ ಸರ್ವನಿವರ್ತಕ
ಯಥಾಯೋಗ್ಯಂ ಸರ್ವಜ್ಞಾನಾಜ್ಞಾನಬಂಧಮೋಕ್ಷಪ್ರದ ಸರ್ವಸತ್ತಾಪ್ರದ

ಸರ್ವಶಬ್ದವಾಚ್ಯ ಸರ್ವಶಬ್ದಪ್ರವೃತ್ತಿನಿಮಿತ್ತ, ಸರ್ವಗುಣಾತಿಪರಿಪೂರ್ಣ-ತಮ, ಸರ್ವದೋಷಾತಿದೂರ, ಸರ್ವಾಚಿಂತ್ಯ, ಸರ್ವೋತ್ತಮ ಸರ್ವೇಶ್ವರ, ಸರ್ವಾತ್ಯಂತವಿಲಕ್ಷಣ, ಸ್ವಗತಭೇದವಿವರ್ಜಿತತ್ವಾದಿನಾ ಭಗವದ್ದಟ್ರೂಣಾಂ, ಅಭಿಮಾನಾದಿ ಸರ್ವದೋಷದೂರಾಣಾಂ ಅಸೂಯೇರ್ಷ್ಯಾದ್ಯ-ಶೇಷಮನೋದೋಷ ನಿವರ್ತಕಾನಾಂ, ನಿತ್ಯಾಪರೋಕ್ಷೀಕೃತ್ರರಮಾ-ಯುಕ್ತಾಶೇಷಭಗವದ್ರೂಪಾಣಾಂ, ಅತ ಏವ ವಿಲೀನಾಶೇಷ-ಪ್ರಕೃತಿಬಂಧಾನಾಂ, ಅತ ಏವ ದೂರೋತ್ಸಾರಿತಾಶೇಷಾನಿಷ್ಟಾನಾಂ, ಅತ ಏವಾಶೇಷಭಕ್ತಾಶೇಷನಿಷ್ಟನಿವರ್ತಕಾನಾಂ, ಪ್ರಣವೋಪಾಸಕಾನಾಂ, ಅಸ್ಮದಾದಿಗುರೂಣಾಂ, ಶ್ರೀಮದಾನಂದತೀರ್ಥ ಶ್ರೀಮಚ್ಚರಣಾನಾಂ, ಅಂತರ್ಯಾಮಿನ್ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವಾತ್ಮಕ, ಶ್ರೀಮಧ್ವವಲ್ಲಭ ಶ್ರೀಲಕ್ಷ್ಮೀವೇದವ್ಯಾಸಾತ್ಮಕ, ಅಂಡಸ್ಥಿತಾನಂತರೂಪಾವಯವ ಗುಣಕ್ರಿಯಾಜಾತ್ಯವಸ್ಥಾವಿಶಿಷ್ಟ, ರಮಾಯುಕ್ತ, ಕ್ಷೀರಾಬ್ಧಿಶೇಷಶಾಯಿ ಶ್ರೀಪದ್ಮನಾಭಾತ್ಮಕ, ಅಂಡಾದ್ಬಹಿರಭಿವ್ಯಕ್ತ ಶುದ್ಧ ಸೃಷ್ಟಿತ್ವೇನಾಭಿಮತ, ಶ್ರೀಚತುರ್ಮುಖ, ಮುಖ್ಯಪ್ರಾಣೋಪಾಸ್ಯತ್ವಾದ್ಯನೇಕ ಪ್ರಯೋಜನಕ ಅನಂತರೂಪ ಮೂಲಭೂತ ತಥಾಶೇಷಜಗತ್ಪಾಲನ ಪ್ರಯೋಜನಕ, ಶಾಂತಿಪತ್ಯನಿರುದ್ಧಮೂಲಭೂತ, ಅಶೇಷಜಗತ್ಸೃಷ್ಟಿಪ್ರಯೋಜನಕ, ಕೃತಿಪತಿ-ಪ್ರದ್ಯುಮ್ನಮೂಲಭೂತ ಜಗತ್ಸಂಹಾರಪ್ರಯೋಜನಕ, ಜಯಾಪತಿ ಸಂಕರ್ಷಣಮೂಲಭೂತ ತಥಾ ಸ್ವಸ್ವಸಮಗ್ರಯೋಗ್ಯತಾಭಿಜ್ಞ, ಪರಮಾನುಗ್ರಹಶೀಲ, ಭಗವತ್ಪ್ರೇರಿತ ಚತುರ್ಮುಖಾದಿ ಸದ್ಗುರೂಪದಿಷ್ಟ, ಸ್ವಸ್ವಯೋಗ್ಯಭಗವದ್ರೂಪಗುಣೋಪಾಸನಯಾ ಸಂಜಾತ ಸ್ವಸ್ವಯೋಗ್ಯ-ಭಗವದ್ರೂಪವಿಶೇಷದರ್ಶನಭೋಗಾಭ್ಯಾಂ, ವಿನಷ್ಟಾನಿಷ್ಟ, ಸಂಚಿತ ಪ್ರಾರಬ್ಧ ಲಕ್ಷಣಾಶೇಷಕರ್ಮಣಾಂ, ಸ್ವಸ್ವಯೋಗ್ಯತಾನುಸಾರೇಣ, ಸಂಪೂರ್ಣ-ಸಾಧನಾನಾಂ, ಪೂರ್ವಕಲ್ಪೇ, ಬ್ರಹ್ಮಣಾ ಸಹ ವಿರಜಾನದೀಸ್ನಾನೇನ,

ತ್ಯಕ್ತಲಿಂಗಾನಾಂ, ತಥಾ ವಿನಷ್ಟಾವಶಿಷ್ಟೇಷ್ಟಾಶೇಷಪ್ರಾರಬ್ಧಕರ್ಮಣಾಂ, ಪ್ರಲಯಕಾಲೇ ಭಗವದುದರೇ ವಸತಾಂ ಆನಂದಮಾತ್ರವಪುಷಾಂ ತದನುಭವರಹಿತಾನಾಂ ಸ್ವಸ್ವಯೋಗ್ಯ ಭಗವದ್ರೂಪವಿಶೇಷಧ್ಯಾನರತಾನಾಂ, ಸೃಷ್ಟಿಕಾಲೇ ಭಗವದಾಜ್ಞಯಾ, ಭಗವದುದರಾದ್ಬಹಿರ್ಗತಾನಾಂ, ಶ್ರೀ ಶ್ವೇತದ್ವೀಪದರ್ಶನಂ ನಿಮಿತ್ತೀಕೃತ್ಯ, ಪ್ರಧಾನಾವರಣಭೂತ ಸ್ವೇಚ್ಛಾಪಸರಣೇನ ಸ್ವಸ್ವಯೋಗ್ಯಾನಂದಾವಿರ್ಭಾವಲಕ್ಷಣ, ಮುಕ್ತಿಪ್ರದಾನ-ಪ್ರಯೋಜಕ ಮಾಯಾಪತಿ ಶ್ರೀ ವಾಸುದೇವಾತ್ಮಕ, ಲಕ್ಷ್ಮ್ಯಾತ್ಮಕ ಪ್ರಳಯಾಬ್ಧಿಸ್ಥ ಶ್ರೀವಟಪತ್ರಶೇಷಶಾಯ್ಯಶೇಷಜಗದುದರಾಶೇಷಮುಕ್ತನಾಭಿದೇಶೋ-ರ್ಧ್ವಭಾಗಕುಕ್ಷ್ಯಾಖ್ಯದೇಶ ತ್ರಿವಿಧಾಶೇಷಸಂಸಾರಿನಾಭಿದೇಶಾಖಿಲತಮಃಪತಿತ, ನಾಭ್ಯಧೋಭಾಗದೇಶ ಶ್ರೀಭೂಮ್ಯಾಲಿಂಗಿತ ಕಾಲಾದಿಚೇಷ್ಟಕ ಪರಮಾ-ಣ್ವಾದ್ಯಶೇಷ ಕಾಲಾವಯವ ಸೃಷ್ಟ್ಯಾದಿಕರ್ತೃ ಶೇಷನಾಮಕ ಪರಮ-ಪುರುಷನಾಮಕ ಶ್ರೀ ಚತುರ್ಮುಖ ಮುಖ್ಯಪ್ರಾಣೋಪಾಸಿತ-ಚರಣಾನಿರುದ್ಧಾದಿ ಚತೂರೂಪಾತ್ಮಕ ಗಾಯತ್ರೀನಾಮಕ, ಸವಿತೃನಾಮಕ ರೂಪವಿಶೇಷಾತ್ಮಕ ವ್ಯಾಪ್ತರೂಪ ಬೃಹಚ್ಛರೀರ ಶೂನ್ಯಾಭಿಧ, ಕಾಲಾಭಿಧ, ಕೇವಲಾಭಿದ, ಬ್ರಹ್ಮಾಭಿಧಾನಂತಾಭಿಧರೂಪವಿಶೇಷಾತ್ಮಕ ನಿರುಪಚರಿತ ಮೂಲರೂಪ ನಿರುಪಚರಿತ ವ್ಯಾಪ್ತಾಪ್ರತಿಬದ್ಧಾನಂತ ತೇಜಃಪುಂಜತಾದೃಶ ರಮಾಯುಕ್ತ ರೂಪವಿಶೇಷಾತ್ಮಕ ಗಾಯತ್ರೀಭೂತವಾಕ್‌ಪೃಥಿವೀಶರೀರ-ಹೃದಯಭೇದೇನ ಷಡ್ವಿಧ ಗಾಯತ್ರೀನಾಮಕ ಲೋಕವೇದಸಮೀರ ರಮಾಂತರ್ಗತ ಪ್ರಣವಾಖ್ಯ ತುರೀಯ ಪಾದೋಪೇತ, ಗಾಯತ್ರೀ-ಪಾದಚತುಷ್ಟಯ ಪ್ರತಿಪಾದ್ಯ ವೈಕುಂಠಸ್ಥಿತ ಅನಂತಾಸನಸ್ಥಿತ ಶ್ವೇತದ್ವೀಪಸ್ಥಿತ ಸರ್ವಜೀವಸ್ಥಿತ ರೂಪಭೇದೇನ ಚತೂರೂಪಾತ್ಮಕನಿರುಪಚರಿತ-ಸರ್ವವಾಗರ್ಥಪ್ರತಿಪಾದಕ ಶ್ರೀದೇವ್ಯಾದಿ ರಮಾರೂಪಾಷ್ಟಕಾಭಿ-ಮನ್ಯಮಾನ ಚಕ್ರಶಂಖವರಾಭಯಯುಕ್ತ ಹಸ್ತಚತುಷ್ಟಯೋಪೇತ

ಪ್ರದೀಪವರ್ಣಸರ್ವಾಭರಣಭೂಷಿತ, ವಿಶ್ವಾದಿಭಗವದ್ರೂಪಾಷ್ಟಕ-ಪ್ರತಿಪಾದಕ, ಅಕಾರಾದ್ಯಷ್ಟಾಕ್ಷರಾತ್ಮಕ, ಶ್ರೀಮತ್ಪ್ರಣವಾದ್ಯಷ್ಟಮಹಾ-ಮಂತ್ರಪ್ರತಿಪಾದ್ಯಷ್ಟರೂಪಾತ್ಮಕ ಮಂತ್ರಾಧ್ಯಾಯೋಕ್ತ ಭೂವರಾಹಾದ್ಯಶೇಷ ವೈಷ್ಣವಮಂತ್ರಪ್ರತಿಪಾದ್ಯ, ಭೂವರಾಹಾದ್ಯಶೇಷರೂಪವಿಶೇಷಾತ್ಮಕ, ರಮಾದಿಮಂತ್ರಪ್ರತಿಪಾದ್ಯ, ರಮಾದಿನಿಷ್ಠ ರಮಾದಿನಾಮಕರೂಪವಿಶೇಷಾತ್ಮಕ, ಶ್ರೀಲಕ್ಷ್ಮೀನೃಸಿಂಹಾತ್ಮಕ, ಪರಮದಯಾಳೋ, ಕ್ಷಮಾಸಮುದ್ರ, ಭಕ್ತವತ್ಸಲ, ಭಕ್ತಾಪರಾಧಸಹಿಷ್ಣೋ, ದೇಶಕಾಲಾಧಿಪತೇ, ದೇಹೇಂದ್ರಿಯಾಧಿಪತೇ, ಸೂರ್ಯವಂಶಧ್ವಜ, ರಘುಕುಲತಿಲಕ, ಲಕ್ಷ್ಮಣಭರತಶತೃಘ್ನಾಗ್ರಜ, ಶ್ರೀಮದ್ಧನುಮದುಪಾಸಿತಚರಣ, ಸೀತಾಪತೇ ಶ್ರೀರಾಮಚಂದ್ರ, ತ್ವದಾಜ್ಞಯಾ, ತ್ವತ್ಪ್ರಸಾದಾತ್, ತ್ವತ್ಪ್ರೇರಣಯಾ, ತ್ವತ್ಪ್ರೀತ್ಯರ್ಥಂ, ತ್ವಾಮುದ್ದಿಶ್ಯ, ತ್ವಾಮನುಸ್ಮರನ್ನೇವ, ತ್ವದಾಜ್ಞಯಾ, ನಿಯತೇ ಮನ್ನಿಯಾಮಕೇಕ, ಸತ್ತಾಪ್ರದವಾಯುನಾಮಕ, ಚೇಷ್ಟಾಪ್ರದ ಪ್ರಾಣನಾಮಕ, ಧಾರಣಾಪ್ರದಧರ್ಮನಾಮಕ, ಮುಕ್ತಿ-ಪ್ರದಭಕ್ತಿನಾಮಕ, ರೂಪವಿಶೇಷೈರ್ಮದ್ಧೃದಿಸ್ಥಿತೇನ, ಪರಮದಯಾಳುನಾ, ಕ್ಷಮಾಸಮುದ್ರೇಣ, ಭಕ್ತವತ್ಸಲೇನ ಭಕ್ತಾಪರಾಧಸಹಿಷ್ಣುನಾ, ಸರ್ವಸ್ವಾಮಿನಾ, ಸರ್ವಪ್ರೇರಕೇಣ, ಸರ್ವತಾತ್ವಿಕದೇವತಾಪ್ರೇರಕೇಣ, ಸರ್ವತಾತ್ತ್ವಿಕಾಸುರ ಭಂಜಕೇನ, ತಥಾ ತತ್ಪ್ರೇರಣಾಪ್ರಯುಕ್ತಾಶೇಷ ದುರ್ಮತಭಂಜಕೇನ ಅತ ಏವ ಪ್ರಭಂಜನಶಬ್ದವಾಚ್ಯೇನ, ಪ್ರತಿದಿನಂ, ಪ್ರತಿಕ್ಷಣಂ ಬುದ್ಧಿಬೋಧಕೇನ ಸರ್ವಕರ್ಮಕರ್ತ್ರಾ, ಸರ್ವಕರ್ಮ ಕಾರಯಿತ್ರಾ, ಸರ್ವಕರ್ಮಸ್ವಾಮಿನಾ, ಸರ್ವಕರ್ಮಸಮರ್ಪಕೇಣ ಸರ್ವಕರ್ಮಫಲಭೋಕ್ತ್ರಾ, ಸರ್ವಕರ್ಮಫಲ-ಭೋಜಯಿತ್ರಾ, ಸರ್ವಕರ್ಮಪ್ರೇರಕೇಣ, ಸರ್ವಕರ್ಮೋದ್ಬೋಧಕೇನ, ಸರ್ವಕರ್ಮಶುದ್ಧಿಪ್ರದೇನ, ಸರ್ವಕರ್ಮಸಿದ್ಧಿಪ್ರದೇನ, ಸರ್ವಕರ್ಮನಿಷ್ಠೇನ, ಸರ್ವಕರ್ಮಸಾಕ್ಷಿಣಾ, ಸರ್ವಕರ್ಮನಿಷ್ಠ ಭಗವದ್ರೂಪೋಪಾಸಕೇನ, ಅತ ಏವ ಅಶೇಷಜೀವನಿಃಸಂಖ್ಯಾನಾದಿಕಾಲೀನ ಧರ್ಮಾಧರ್ಮದ್ರಷ್ಟ್ರಾ,

ಸ್ವೇಚ್ಛಯೋದ್ಬೋಧಕೇನ , ತದ್ವಾಚಕ ಕಪಿಲೋಪಾಸಕೇನ,
ರಮಾವ್ಯತಿರಿಕ್ತಪೂರ್ವಪ್ರಸಿದ್ಧ ವ್ಯತಿರಿಕ್ತಾನಂತವೇದಪ್ರತಿಪಾದ್ಯ
ಮುಖ್ಯತಮೇನ ಅನಂತಗುಣಪರಿಪೂರ್ಣೇನ ಸರ್ವದೋಷದೂರೇಣ
ತ್ವಚ್ಚಿತ್ತಾಭಿಜ್ಞೇನ ತ್ವಚ್ಚಿತ್ತಾನುಸಾರಿಚಿತ್ತೇನ ತ್ವತ್ಪರಮಾನುಗ್ರಹಪಾತ್ರಭೂತೇನ
ಮದ್ಯೋಗ್ಯತಾಭಿಜ್ಞೇನ, ಶ್ರೀಭಾರತೀರಮಣೇನ, ರುದ್ರಾದ್ಯಶೇಷತಾತ್ವಿಕ-
ದೇವತೋಪಾಸಿತಚರಣೇನ ಮಮ ಸರ್ವಾಸ್ವವಸ್ಥಾಸು ಚಿತ್ರಧಾ ವಿಚಿತ್ರಧಾ
ತ್ವದುಪಾಸಕೇನ ಶ್ರೀಮುಖ್ಯಪ್ರಾಣೇನ ಪ್ರೇರಿತಃ ಸನ್ ತ್ವತ್ಸಂಸ್ಮೃತಿಪೂರ್ವಕಂ
ಶಯನಾತ್ ಸಮುತ್ಥಾಯಾದ್ಯತನಂ, ಸ್ವವರ್ಣಾಶ್ರಮೋಚಿತಂ
ದೇಶಕಾಲಾವಸ್ಥೋಚಿತಂ, ನಿತ್ಯನೈಮಿತ್ತಿಕ ಕಾಮ್ಯಭೇದೇನ, ತ್ರಿವಿಧಂ
ತ್ವತ್ಪೂಜಾತ್ಮಕಂ ಕರ್ಮ, ಯಥಾಶಕ್ತಿ ಯಥಾಜ್ಞಪ್ತಿ ಯಥಾವೈಭವಂ ಕರಿಷ್ಯೇ,
ಮದಾಜ್ಞಾಕಾರಿಭಿರ್ವಿದ್ಯಾಸಂಬಂಧಿಭಿರ್ದೇಹಸಂಬಂಧಿಭಿಶ್ಚ ತ್ವದೀಯೈರ-
ಶೇಷೈರ್ಜನೈಸ್ತತ್ಸರ್ವ, ಕರ್ಮಕರ್ತೃತ್ವಕಾರಯಿತೃತ್ವಾದ್ಯನುಸಂಧಾನ-
ಪೂರ್ವಕಂ ಕಾರಯಿಷ್ಯೇ ಚ ॥

# ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಮ್

# ಪ್ರಾತಃಸಂಕಲ್ಪಗದ್ಯಮ್

ಶ್ರೀ ಗುರುಭ್ಯೋ ನಮಃ ॥ ಹರಿಃ ಓಮ್ ॥

೧. ಲೌಕಿಕವೈದಿಕಭೇದಭಿನ್ನ ವರ್ಣಾತ್ಮಕ ಧ್ವನ್ಯಾತ್ಮಕಾಶೇಷಶಬ್ದಾರ್ಥ ಋಗಾದಿಸರ್ವವೇದಾರ್ಥ ವಿಷ್ಣುಮಂತ್ರಾರ್ಥ ಪುರುಷಸೂಕ್ತಾರ್ಥ ಗಾಯತ್ರ್ಯರ್ಥ ವಾಸುದೇವದ್ವಾದಶಾಕ್ಷರಮಂತ್ರಾಂತರ್ಗತ ಆದ್ಯ-ಷ್ಟಾಕ್ಷರಾರ್ಥ ಶ್ರೀಮನ್ನಾರಾಯಣಾಷ್ಟಾಕ್ಷರಮಂತ್ರಾರ್ಥ ವಾಸು-ದೇವ ದ್ವಾದಶಾಕ್ಷರಮಂತ್ರಾಂತರ್ಗತ ಅಂತ್ಯಚತುರಕ್ಷರಾರ್ಥ ವ್ಯಾಹೃತ್ಯರ್ಥ ಮಾತೃಕಾಮಂತ್ರಾರ್ಥ ಪ್ರಣೋಪಾಸಕಾನಾಂ......

ಪ್ರತಿಪದಾರ್ಥ :- ಲೌಕಿಕ-ವೈದಿಕ ಭೇದಭಿನ್ನ ಲೌಕಿಕ ಹಾಗೂ ವೈದಿಕ ಶಬ್ದಗಳೆಂಬ ಭಿನ್ನಗಳೂ, ವರ್ಣಾತ್ಮಕ ಧ್ವನ್ಯಾತ್ಮಕ-ವರ್ಣ ಹಾಗೂ ಧ್ವನಿರೂಪವಾದ, ಅಶೇಷ ಶಬ್ದಾರ್ಥ ಎಲ್ಲಾ ಶಬ್ದಗಳ ಅರ್ಥಗಳನ್ನು, ಋಗಾದಿ ಸರ್ವವೇದಾರ್ಥ ಋಗಾದಿ ಸರ್ವ ವೇದಗಳ ಅರ್ಥವನ್ನೇ ತಿಳಿಸುವ ವಿಷ್ಣುಮಂತ್ರಾರ್ಥ. ವಿಷ್ಣುಮಂತ್ರಾರ್ಥವನ್ನು ಪುರುಷಸೂಕ್ತಾರ್ಥ. ಪುರುಷಸೂಕ್ತಾರ್ಥವನ್ನು ಗಾಯತ್ರ್ಯರ್ಥ - ಗಾಯತ್ರಿ ಪ್ರತಿಪಾದ್ಯ ಅರ್ಥವನ್ನು ವಾಸುದೇವ ದ್ವಾದಶಾಕ್ಷರಾರ್ಥ. ವಾಸುದೇವ ದ್ವಾದಶಾಕ್ಷರದ ಮೊದಲ ಎಂಟು ಅಕ್ಷರದಲ್ಲಿ ಮಂತ್ರದಲ್ಲಿನ ಅದ್ಯಷ್ಟಾಕ್ಷರಾರ್ಥ - ಮೊದಲಿನ ಎಂಟು ಅಕ್ಷರ ಪ್ರತಿಪಾದ್ಯಗಳಾದ, ಶ್ರೀಮನ್ನಾರಾಯಣಾಕ್ಷರ ಮಂತ್ರಾರ್ಥ– 'ಓಂ ನಮೋ ನಾರಾಯಣಾಯ' ಎಂಬ ಎಂಟಕ್ಷರ ಪ್ರತಿಪಾದ್ಯಗಳು ಹಾಗೂ ವಾಸುದೇವದ್ವಾದಶಾಕ್ಷರ ಮಂತ್ರಾತರ್ಗತ ಓಂ ನಮೋ ಭಗವತೇ ವಾಸುದೇವಾಯ ನಮಃ ಎಂಬ ಹನ್ನೆರಡು ಅಕ್ಷರದಲ್ಲಿನ, ಅಂತ್ಯ ಚತುರಕ್ಷರಾರ್ಥ, ಕಡೆಯ ನಾಲ್ಕು ಅಕ್ಷರ ಪ್ರತಿಪಾದ್ಯಗಳಾದ, ವ್ಯಾಹೃತ್ಯರ್ಥ. ಭೂಃ ಇದೇ ಮೊದಲಾದ ವ್ಯಾಹೃತಿಗಳಿಂದ ಪ್ರತಿಪಾದ್ಯಗಳಾದ ಮಾತೃಕಾ ಮಂತ್ರಾರ್ಥ. 'ಅ'ಕಾರವೇ ಮೊದಲಾದ ೫೦ ವರ್ಣಗಳ ಪ್ರತಿಪಾದ್ಯಗಳೂ ಆಗಿರುವ ಎಲ್ಲಾ ಬಗೆಯ ಶ್ರೀಹರಿಯ ರೂಪಗಳನ್ನು ಪ್ರತಿಪಾದಿಸುವ, ಪ್ರಣವೋಪಾಸಕಾನಾಂ -

ಪ್ರಣವ (ಓಂ) ಮಂತ್ರೋಪಾಸನೆಯನ್ನು ಮಾಡುವ ಮುಖ್ಯ ಜಪಾಧಿಕಾರಿಗಳು ಪ್ರಧಾನರಾದ ಶ್ರೀವಾಯುದೇವರು.

**ತಾತ್ಪರ್ಯ** :- ಅಪೌರುಷೇಯವಾದ ವೇದದಲ್ಲಿ ವಿಕಾರ ರಹಿತವಾದ ವರ್ಣಗಳು ವೈದಿಕ ವರ್ಣಗಳಾದರೆ ಪ್ರಾಕೃತ ಭಾಷೆಗಳ ವರ್ಣಗಳು ಲೌಕಿಕ ವರ್ಣಗಳು ಎನಿಸಿವೆ. ಈ ಎರಡೂ ಬಗೆಯ ವರ್ಣಗಳು ಹಾಗೂ ವರ್ಣಗಳ ಕೂಡುವಿಕೆಯಿಂದ ಉಂಟಾದ ನಾನಾ ಪದಗಳಿಂದಲೂ ಪದಗಳ ಸಮೂಹಗಳಾದ ವಾಕ್ಯಗಳಿಂದಲೂ ಶ್ರೀಹರಿಯೇ ಮುಖ್ಯ ವಾಚ್ಯನಾಗಿದ್ದಾನೆ. ಆ ಎಲ್ಲಾ ವರ್ಣಪದವಾಕ್ಯಗಳು ಶ್ರೀ ಹರಿಗಿಂತ ಅಭಿನ್ನವಾದ ಆತನ ಗುಣಗಳನ್ನೇ ಗಾಯನ ಮಾಡುತ್ತದೆ. ಶ್ರೀಹರಿಯ ಈ ಬಗೆಯ ಸರ್ವಶಬ್ದವಾಚ್ಯತ್ವವನ್ನು ಶ್ರೀಬಾದರಾಯಣರು ತಮ್ಮ ಬ್ರಹ್ಮಸೂತ್ರಗಳಲ್ಲಿ ಯುಕ್ತಿಯುಕ್ತವಾಗಿ ವಿವರಿಸಿದ್ದಾರೆ. ಅಂತಹ ಶಬ್ದಗಳಲ್ಲಿ ಎರಡು ವಿಧ. ಒಂದು ಧ್ವನ್ಯಾತ್ಮಕವಾದರೆ ಮತ್ತೊಂದು ವರ್ಣಾತ್ಮಕವಾಗಿದೆ. ಅಂತ ಧ್ವನಿಗಳು ಅಂದರೆ ಸಮುದ್ರ ಘೋಷ ಹಾಗೂ ವೃಕ್ಷ ಪತನ, ಭೇರಿತಾಡನ ಮುಂತಾದ ಕ್ರಿಯೆಗಳಿಂದ ಉಂಟಾದ ಧ್ವನಿಗಳೂ ಕೂಡ ಶ್ರೀಹರಿಯು ಅನನ್ಯವಾದ ಮಹಾಮಹಿಮೆಯನ್ನೇ ಹೇಳುತ್ತವೆ ಎಂದು ಐತರೇಯಭಾಷ್ಯದಲ್ಲಿ ಶ್ರೀಮಧ್ವಾಚಾರ್ಯರು ತಿಳಿಸಿದ್ದಾರೆ. ನಾನಾ ಶಾಖೆಗಳಿಂದ ಯುಕ್ತವಾದ ಋಗ್ವೇದಾದಿ ನಾಲ್ಕು ವೇದಗಳು, ವಿಷ್ಣುಮಂತ್ರ, ಪುರುಷಸೂಕ್ತಮಂತ್ರ, ಗಾಯತ್ರಿ ಇದೆ ಮೊದಲಾದ ಎಲ್ಲಾ ಮಂತ್ರಗಳು ಹೇಳುವ ಶ್ರೀಹರಿಯ ಗುಣವನ್ನು ಒಂದೇ ಪ್ರಣವಮಂತ್ರವು (ಓಂಕಾರ) ಪ್ರತಿಪಾದಿಸುತ್ತದೆ. ಅಂತಹ ಪ್ರಣವವು ಶಬ್ದಾರ್ಥ ಹಾಗೂ ವಾಗಾರ್ಥವನ್ನು ಒಳಗೊಂಡಿದೆ. ಈ ಪ್ರಣವವು ಭೂಃ ಭುವಃ ಸ್ವಃ ಎಂಬ ವ್ಯಾಹೃತಿಗಳಿಂದ ಕೂಡಿದೆ. ಇಂತಹ ವ್ಯಾಹೃತಿಯ ವ್ಯಾಖ್ಯಾನವೇ ಗಾಯತ್ರಿಮಂತ್ರವಾಗಿದೆ. ಇದು ಮೂರು ಪಾದಗಳಿಂದ ಕೂಡಿದೆ. ಈ ಬಗೆಯ ಗಾಯತ್ರಿ ಮಂತ್ರದ ವಿವರಣೆಯೇ ಪುರುಷಸೂಕ್ತವಾಗಿ ಹೊರಹೊಮ್ಮಿದೆ. ಆ ಪುರುಷಸೂಕ್ತದ ವಿಸ್ತೃತರೂಪವೇ ಸಕಲ ವೇದಾದಿಗಳು ಆಗಿವೆ. ಭವ್ಯವಾದ ಇಂತಹ ಮಹಿಮೆ ಉಳ್ಳ ಪುರುಷಸೂಕ್ತವು

ಅಷ್ಟಮಹಾಮಂತ್ರಗಳಲ್ಲಿ ಒಂದಾಗಿದೆ. ಕೇಶವಾದಿ ೧೨ ರೂಪಗಳು ಹಾಗೂ ಸಂಕರ್ಷಣಾದಿ ೧೨ ಭಗವದ್ರೂಪಗಳು ಒಟ್ಟು ಸೇರಿ ೨೪ ಹರಿಯ ರೂಪಗಳು ಗಾಯತ್ರಿ ಅಕ್ಷರ ಪ್ರತಿಪಾದ್ಯ ರೂಪಗಳು. ಇಂತಹ ತ್ರಿಪದಿಯಾದ ಗಾಯತ್ರಿಯನ್ನು ಪುರುಷ ಸೂಕ್ತದ ಮೂರು ವರ್ಗಗಳು ವರ್ಣಿಸುತ್ತದೆ. ಹೀಗೆ ಗಾಯತ್ರಿ ಪ್ರತಿಪಾದ್ಯ ಭಗವದ್ರೂಪ, ವಿಷ್ಣುಮಂತ್ರ ಪ್ರತಿಪಾದ್ಯ ಭಗವದ್ರೂಪ ಅಕಾರಾದಿ ಮಾತೃಕ ಮಂತ್ರಪ್ರತಿಪಾದ್ಯರೂಪ, ವ್ಯಾಹೃತಿ ಪ್ರತಿಪಾದ್ಯ ಭಗವದ್ರೂಪ, ಇವು ತಿಳಿಸುವ ಎಲ್ಲಾ ಹರಿಯ ಮೂರ್ತಿಗಳನ್ನು ಪ್ರಣವ ಒಂದೇ ಪ್ರತಿಪಾದಿಸುತ್ತದೆ. ಅದನ್ನು ಆಚಾರ್ಯರು ತಮ್ಮ ತಂತ್ರಸಾರ ಗ್ರಂಥದಲ್ಲಿ ವಿವರಿಸಿದ್ದಾರೆ. ಈ ಬಗೆಯಿಂದ ತಿಳಿದು ಅಂತೆಯೇ ಆ ಎಲ್ಲಾ ಹರಿಯ ಮೂರ್ತಿಗಳನ್ನು ಸಾಕ್ಷಾತ್ಕರಿಸಿಕೊಂಡು ಉಪಾಸನೆ ಮಾಡುವ ಮಹಾಯೋಗ್ಯತೆಯನ್ನು ಪಡೆದ ಮಹಾನುಭಾವರು ಜೀವೋತ್ತಮರಾದ ಶ್ರೀವಾಯುದೇವರೇ ಆಗಿದ್ದಾರೆ. ಅದನ್ನೇ ರಾಯರು ಅಂತ್ಯದಲ್ಲಿ ಪ್ರಣವೋಪಾಸಕಾನಾಂ ಎಂದು ಗದ್ಯದಲ್ಲಿ ಸಂಗ್ರಹಿಸಿದ್ದಾರೆ.

೨. **ಪಾಪಾವಿದ್ಧ ದೈತ್ಯಪೂಗಾವಿದ್ಧ ಶ್ರೀವಿಷ್ಣುಭಕ್ತ್ಯಾದ್ಯನಂತ-ಗುಣಪರಿಪೂರ್ಣ ರಮಾವ್ಯತಿರಿಕ್ತ ಪೂರ್ವಪ್ರಸಿದ್ಧವ್ಯತಿರಿಕ್ತಾ-ನಂತವೇದಪ್ರತಿಪಾದ್ಯ ಮುಖ್ಯತಮಾನಂತಜೀವನಿಯಮಕಾ-ನಂತರೂಪ ಭಗವತ್ಕಾರ್ಯಸಾಧಕ ಪರಮದಯಾಳು ಕ್ಷಮಾ-ಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣು ಶ್ರೀಮುಖ್ಯಪ್ರಾಣಾವ-ತಾರಭೂತಾನಾಂ.....**

**ಪ್ರತಿಪದಾರ್ಥ :-** ಪಾಪವಿದ್ದ ಪಾಪ ಸಂಬಂಧ ಇಲ್ಲದವರು, ದೈತ್ಯ ಪೂಗಾವಿದ್ಧ ದೈತ್ಯರ ಸಮೂಹದಿಂದ ಅಸ್ಪೃಷ್ಟರೂ, ಶ್ರೀವಿಷ್ಣುಭಕ್ತ್ಯಾದ್ಯನಂತಗುಣ ಪರಿಪೂರ್ಣ ಹರಿಯಲ್ಲಿ ಭಕ್ತಿಯೇ ಮೊದಲಾದ ಅಸಂಖ್ಯವಾದ ಉತ್ತಮ ಗುಣಗಳಿಂದ ಕೂಡಿದವರೂ, ರಮಾ ವ್ಯತಿರಿಕ್ತ ಶ್ರೀರಮಾದೇವಿಯರನ್ನು ಉಳಿದು ಪೂರ್ವಪ್ರಸಿದ್ಧ ವ್ಯತಿರಿಕ್ತ, ಅನಾದಿಸಿದ್ಧನಾದ ಶ್ರೀಹರಿಯನ್ನು ಬಿಟ್ಟು, ಅನಂತವೇದ ಪ್ರತಿಪಾದ್ಯ ಅನಂತವಾದ ವೇದಗಳಲ್ಲಿ ಪ್ರತಿಪಾದ್ಯರಾದ ಇಂದ್ರಾದಿ ದೇವತೆಗಳ

ಮಧ್ಯದಲ್ಲಿ ಮುಖ್ಯತಮ, ಮುಖ್ಯತಮ ಶ್ರೇಷ್ಠರಾದ, ಅನಂತ ಜೀವ ನಿಯಾಮಕ ನಿತ್ಯರಾದ ಅನಂತ ಜೀವಜಾತ ಸರ್ವರೀತಿಯ ನಿಯಾಮಕರಾದ, ಅನಂತರೂಪ - ಅನಂತ ರೂಪಗಳನ್ನು ಧರಿಸಿದವರಾದ ಭಗವತ್ ಕಾರ್ಯಸಾಧಕಃ - ಹರಿ ಮಾಡುವ ಜಗತ್ತಿಗೆ ಸಂಬಂಧಿಸಿದ ಕಾರ್ಯಗಳಲ್ಲಿ ಪ್ರಧಾನಾಂಗಭೂತರಾಗಿ ಕಾರ್ಯ-ಸಾಧಕರಾದ, ಪರಮದಯಾಳು - ಪರಮಕೃಪಾಳುಗಳಾದ ಕ್ಷಮಾ ಸಮುದ್ರ ಎಣೆಯೇ ಇಲ್ಲದ ಕ್ಷಮಾಗುಣವಂತರಾದ ಭಕ್ತವತ್ಸಲ-ಭಕ್ತವತ್ಸಲದಿಂದ ಕೂಡಿದವರಾದ, ಭಕ್ತಾಪರಾಧಸಹಿಷ್ಣು - ಭಕ್ತರ ಅಪರಾದಗಳನ್ನು ಕ್ಷಮಿಸುವುದರಲ್ಲಿ ಅಗ್ರಗಣ್ಯರಾದ, ಶ್ರೀಮುಖ್ಯಪ್ರಾಣಾವತಾರ ಭೂತಾನಾಂ – ಶ್ರೀಮುಖ್ಯಪ್ರಾಣದೇವರ ಅವತಾರಿಭೂತರಾದ ಶ್ರೀಮದಾನಂದ ತೀರ್ಥ ಭಗವತ್ಪಾದರು.

**ತಾತ್ಪರ್ಯ** :- ವಾಯುದೇವರ ಗುಣಾತಿಶಯಗಳನ್ನೇ ವರ್ಣಿಸುತ್ತಾ ಶ್ರೀವಾಯುದೇವರ ಮುಖ್ಯ ಮಹಿಮೆ ಎಂದರೆ ಅವರು ಪಾಪಲೇಪರಹಿತರು ಯಾವ ದೈತ್ಯನೂ ಅವರನ್ನು ಮುಟ್ಟಲಾರ. ಶ್ರೀವಿಷ್ಣುವಿನಲ್ಲಿ ಸ್ವಾಭಾವಿಕವಾದ ಭಕ್ತಿಯೇ ಮೊದಲಾದ ಅನೇಕಾನೇಕ ಗುಣಗಳಿಂದ ಭೂಯಿಷ್ಠರೂ ದುಃಖ, ಅಜ್ಞಾನಾದಿ ದೋಷಾಗಳ ಸ್ಪರ್ಶ ಯಾವಕಾಲಕ್ಕೂ ಇಲ್ಲದವರೂ ಆಗಿದ್ದಾರೆ. ಎಲ್ಲಾ ವೇದಗಳೂ ಪರಮಮುಖ್ಯ ವೃತ್ತಿಯಿಂದ ಭಗವಂತನನ್ನು ಪ್ರತಿಪಾದಿಸುತ್ತದೆ. ಹರಿಯ ನಂತರ ವೇದಗಳು ಜಗದ ತಾಯಿಯಾದ ರಮೆಯನ್ನು ಕೊಂಡಾಡುತ್ತದೆ. ಇವರೀರ್ವರನ್ನು ಉಳಿದು ಮತ್ತು ನಾರಾಯಣನಲ್ಲಿಯೇ ವೃತ್ತಿಯುಳ್ಳ ಕೆಲವು ವಿಶಿಷ್ಠವಾದ ಶಬ್ದಗಳನ್ನು ಹೊರತುಪಡಿಸಿ ಸಕಲವೇದಪ್ರತಿಪಾದ್ಯತ್ವವು ಶ್ರೀವಾಯುದೇವರಲ್ಲಿದೆ. ಅಗ್ನಿಯೇ ಮೊದಲಾದ ವೇದದಲ್ಲಿ ಅಮುಖ್ಯವಾಗಿ ಪ್ರತಿಪಾದಿತರಾದ ದೇವತೆಗಳಲ್ಲಿ ಈತನೇ ಮುಖ್ಯತಮನಾಗಿದ್ದಾನೆ. ಅಂತಹ ವೇದಪ್ರತಿಪಾದ್ಯರಾದ ಅಗ್ನಿಯೇ ಮೊದಲಾದ ದೇವತೆಗಳ ಸಹಿತ ಅನಂತ ಜೀವರಾಶಿಗಳಿಗೆ ನಿಯಾಮಕನಾದ ಮಹಾನುಭಾವ ಈ ಮುಖ್ಯಪ್ರಾಣನು. ಅನಂತರೂಪ ಉಳ್ಳವರಾಗಿ ಅನಂತ ಜೀವರ ನಿಯಾಮಕರೂ ಆಗಿದ್ದಾರೆ. ಸೃಷ್ಟಿಯೇ ಮೊದಲಾದ ಹರಿಯ ಕಾರ್ಯಗಳಲ್ಲಿ ಪ್ರಧಾನಾಂಗರಾಗಿ ಹರಿಯ ಸೇವಾ ಕೈಂಕರ್ಯ ಮಾಡುವ ಮಹಾ ಪುರುಷರೇ ಈ ಮುಖ್ಯಪ್ರಾಣರು. ಎಲ್ಲಾ

ಬಗೆಯ ಜೀವರನ್ನು ಎಲ್ಲಾ ಬಗೆಯಿಂದ ನಿಯಮಿಸುವ ಈ ವಾಯುದೇವರು ಪರಮ ದಯಾಳುಗಳು, ಕ್ಷಮಸಮುದ್ರರು, ಭಕ್ತರಲ್ಲಿ ವಾತ್ಸಲ್ಯ ಉಳ್ಳವರು, ಭಕ್ತರು ಮಾಡುವ ಅಪರಾದಗಳ ಸಹಿಸಿ, ಕ್ಷಮಿಸಿ ಸನ್ಮಾರ್ಗದಲ್ಲಿ ಇಟ್ಟು ಉದ್ದರಿಸುವ ಮಹಾನುಭಾವರು, ಇಂತಹ ವಾಯುದೇವರ ತೃತೀಯ ಅವತಾರವೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು.

೩. **ಅಜ್ಞ ಜ್ಞಾನಾರ್ಥಿ ಜ್ಞಾನಯೋಗ್ಯ ಭಗವತ್ಕೃಪಾಪಾತ್ರಭೂತ ಸಲ್ಲೋಕಕೃಪಾಳು ಬ್ರಹ್ಮರುದ್ರಾದ್ಯರ್ಥಿತ ಭಗವದಾಜ್ಞಾಂ ಶಿರಸಿ ಪರಮಾದರೇಣಾನರ್ಘ್ಯಶಿರೋರತ್ನವನ್ನಿಧಾಯ ತಥಾऽಶೇಷ-ದೇವತಾಪ್ರಾರ್ಥನಾಂ ಹಾರವದ್ ಹೃದಿ ನಿಧಾಯ ಸರ್ವ-ಸ್ವಕೀಯಸಜ್ಜನಾನುಗ್ರಹೇಚ್ಛಯಾ ಕರ್ಮಭುವ್ಯವತೀರ್ಣಾನಾಂ.....**

**ಪ್ರತಿಪದಾರ್ಥ :-** ಅಜ್ಞ-ಜ್ಞಾನರಹಿತರೂ, ಜ್ಞಾನಾರ್ಥಿ-ಜ್ಞಾನಕ್ಕಾಗಿ ಪ್ರಾರ್ಥಿಸುವರು ಜ್ಞಾನಯೋಗ್ಯ-ಜ್ಞಾನಾರ್ಹತೆಯುಳ್ಳವರೂ, ಭಗವತ್ಕೃ- ಪಾಪಾತ್ರ-ಭೂತ - ಹರಿಯ ಕೃಪೆಗೆ ಪಾತ್ರಭೂತರೂ ಆದ, ಸಲ್ಲೋಕ ಕೃಪಾಳು ಬ್ರಹ್ಮರುದ್ರಾದ್ಯರ್ಥಿತ - ಸಾತ್ವಿಕ ಜೀವರ ಮೇಲೆ ಕೃಪಾ ಮಾಡುವ ಸ್ವಭಾವವುಳ್ಳವ-ರಾದ, ಹಾಗೂ ಬ್ರಹ್ಮಾದಿಗಳಿಂದ ಪ್ರಾರ್ಥಿತರಾಗಿ ಮಾಡಿದ, ಭಗವದಾಜ್ಞಾಂ - ಹರಿಯ ಆಜ್ಞೆಯನ್ನು, ಶಿರಸಿ-ಶಿರದಲ್ಲಿ, ಪರಮಾದರೇಣ- ಅತ್ಯಂತ ಆದರ ಪುರಸ್ಸರವಾಗಿ, ಅನರ್ಘ್ಯ ಶಿರೋರತ್ನವತ್ ಅತ್ಯಮೂಲ್ಯವಾದ ಶಿರದ ರತ್ನದಂತೆ, ನಿಧಾಯ ಧರಿಸಿ ತಥಾ ಹಾಗೆಯೇ ಅಶೇಷದೇವತಾ ಪ್ರಾರ್ಥನಾಂ-ಸರ್ವದೇವತೆಗಳ ಪ್ರಾರ್ಥನೆಯನ್ನು, ಹಾರವತ್- ಹಾರದಂತೆ, ಹೃದಿ-ಎದೆಯಲ್ಲಿ, ನಿಧಾಯ-ಧರಿಸಿ, ಸರ್ವಸ್ವಕೀಯ ಸಜ್ಜನಾನು- ಗೃಹೇಚ್ಛಯಾ ತನ್ನವರಾದ ಎಲ್ಲಾ ಸಜ್ಜನರನ್ನು ಅನುಗ್ರಹ ಮಾಡಬೇಕೆಂಬ ಇಚ್ಛೆಯಿಂದ, ಕರ್ಮಭುವಿ-ಕರ್ಮಭೂಮಿಯಲ್ಲಿ (ಭರತ-ಖಂಡದಲ್ಲಿ) ಅವತೀರ್ಣಾನಾಂ- ಅವತಾರ ಮಾಡಿದ ಮುಖ್ಯಪ್ರಾಣನ,

**ತಾತ್ಪರ್ಯ :-** ಅಜ್ಞ ಎಂದರೆ ಜ್ಞಾನರಹಿತರು ಎಂದರ್ಥ. ಜ್ಞಾನವೆಂದರೆ ಕೇವಲ ವಿಷಯ ಗ್ರಹಣ ಶಕ್ತಿಯನ್ನೇ ಜ್ಞಾನವೆಂದು ಜ್ಞಾನಿಗಳು ಹೇಳುವುದಿಲ್ಲ.

ಮತ್ತೇನೆಂದರೆ ಭಗವದ್ವಿಷಯಕ ಅಪರೋಕ್ಷವೇ ಜ್ಞಾನವು. ಅಂತಹ ಜ್ಞಾನಕ್ಕೆ ಪ್ರಯತ್ನಿಸಿದವರಿಗೆಲ್ಲಾ ಜ್ಞಾನ ದೊರೆಯದು. ಅರ್ಹರಿಗೆ ಮಾತ್ರ ದೊರೆಯುತ್ತದೆ ಯೋಗ್ಯರಿದ್ದು- ಜ್ಞಾನವಿಲ್ಲದೆ ಅದನ್ನು ಪಡೆಯಲು ಬಯಸುವವರು ಮಾತ್ರ ಶ್ರೀಹರಿಗೆ ಕೃಪಾಪಾತ್ರರಾಗಿದ್ದಾರೆ. ಇಂತಹ ಸುಜೀವರ ಗುಂಪೇ ಸಲ್ಲೋಕರು ಇಂತಹವರ ಮೇಲೆ ಕೃಪೆಯುಳ್ಳ ಬ್ರಹ್ಮಾದಿ ದೇವತೆಗಳು ಸಜ್ಜನರ ಆಪತ್ತುಗಳ ಪರಿಹಾರಕ್ಕೆ ಶ್ರೀಹರಿಯಲ್ಲಿ ಪ್ರಾರ್ಥಿಸುವರು. ಅಲ್ಲದೆ ದುರ್ಮತಗಳು ಹೆಚ್ಚಾಗಿ ಅಜ್ಞಾನವೆಂಬ ಅಂಧಕಾರ ಎಲ್ಲಡೆ ವ್ಯಾಪಿಸಿದಾಗ ಜಿಜ್ಞಾಸುಗಳು ಬಹಳವಾಗಿ ಮನನೊಂದರು. ಆಗ ಅಂತಹ ಸಜ್ಜನರ ಮೇಲಿನ ಕೃಪೆಯಿಂದಾಗಿ ಬ್ರಹ್ಮಾದಿಗಳು ಜ್ಞಾನಕ್ಕಾಗಿ ಹರಿಯನ್ನು ಪ್ರಾರ್ಥಿಸಿದರು. ಆಗ ಶ್ರೀಹರಿಯು ಜೀವೋತ್ತಮರಾದ ವಾಯುದೇವರನ್ನು ಕಂಡು ಹೇ ಸುಮುಖ ತತ್ವದ ಮಾರ್ಗವನ್ನು ಅರಿಯದೇ ನನ್ನ ಕೃಪೆಗೆ ಪಾತ್ರರಾದ, ದೇವತಾಸ್ವಭಾವದ ಸಜ್ಜನರಿಗೆ ಜ್ಞಾನ ಕೊಟ್ಟು ಅನುಗ್ರಹಿಸಲು ಕರ್ಮಭೂಮಿಯಲ್ಲಿ ಅವತರಿಸು ಎಂದು ಅಜ್ಞಾಪಿಸಿದನು. ಸ್ವಯಂ ಕಲಿಯಿಂದಲೇ ಅಭಿಮನ್ಯವಾದ ಅಜ್ಞಾನವನ್ನು ಹೊಡೆದೋಡಿಸುವ ಶಕ್ತಿ ಕೇವಲ ಶ್ರೀವಾಯುದೇವರಿಂದ ಮಾತ್ರ ಸಾಧ್ಯ. ಅಂತಹ ಶ್ರೀವಾಯುದೇವರು ಶ್ರೀಹರಿಯ ಆದೇಶವನ್ನು ತಲೆಯಲ್ಲಿ ರತ್ನಮಣಿಯಂತೆ ಧರಿಸಿ, ರುದ್ರಾದಿ ದೇವತಾ ಸಮೂಹದ ಪ್ರಾರ್ಥನೆಯನ್ನು ಹಾರದಂತೆ ಧರಿಸಿ ತಮ್ಮವರೇ ಆದ ಎಲ್ಲಾ ಬಗೆಯ ಸಜ್ಜನರನ್ನು ಅನುಗ್ರಹಿಸುವ ಇಚ್ಛೆಯಿಂದ ಕರ್ಮಭೂಮಿಯಾದ ಭರತಖಂಡದಲ್ಲಿ ಅವತರಿಸಿದರು.

**೪. ತಥಾವತೀರ್ಯ ಸಕಲಸಚ್ಛಾಸ್ತ್ರಕರ್ತೄಣಾಂ ಸಕಲದುರ್ಮತ-ಭಂಜಕಾನಾಂ ಅನಾದಿತಃ ಸತ್ಸಂಪ್ರದಾಯಪರಂಪರಾಪ್ರಾಪ್ತ ಶ್ರೀಮದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪಕಾನಾಂ....**

**ಪ್ರತಿಪದಾರ್ಥ :-** ತಥಾ ಅವತೀರ್ಯ ಹಾಗೆ ಅವತಾರ ಮಾಡಿ, ಸಕಲ-ಸಚ್ಛಾಸ್ತ್ರಕರ್ತೄಣಾಂ ಸಕಲ ಸಮೀಚೀನವಾದ ಶಾಸ್ತ್ರಗಳನ್ನು ರಚಿಸಿದ, ಸಕಲದುರ್ಮತ

ಭಂಜಕಾನಾಂ ಎಲ್ಲಾ ಕುಮತಗಳನ್ನು ಖಂಡಿಸಿದವರು ಆದ ಅನಾದಿತಃ – ಅನಾದಿಯಿಂದ ಸತ್‌ಸಂಪ್ರದಾಯ ಪರಂಪರಾಪ್ರಾಪ್ತ. ಸಮೀಚೀನವಾದ ಸಂಪ್ರದಾಯ ಪರಂಪರೆಯಿಂದ ಹರಿದುಬಂದ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪಕಾನಾಂ ಶ್ರೀಹರಿಯೇ ಸರ್ವೋತ್ತಮನೆಂಬ ಸತ್‌ಸಿದ್ಧಾಂತವನ್ನು ಸ್ಥಾಪಿಸಿದವರು ಶ್ರೀಮದಾನಂದತೀರ್ಥ ಭಗವತ್ಪಾದರು.

**ತಾತ್ಪರ್ಯ :-** ಹೀಗೆ ಅವತರಿಸಿದ ವಾಯುದೇವರ ಅವತಾರಿಭೂತರಾದ ಶ್ರೀಮಧ್ವಾಚಾರ್ಯರು ಸಕಲದುರ್ಮತವನ್ನು ಖಂಡಿಸಿ ಸರ್ವಮೂಲವೆಂದು ಪ್ರಸಿದ್ಧವಾದ ಗ್ರಂಥಗಳನ್ನು ರಚಿಸಿ, ಅನಾದಿಯಿಂದ ಬಂದ ವೈಷ್ಣವ ಸತ್‌ಸಂಪ್ರದಾಯವನ್ನು ಪ್ರತಿಷ್ಠಾಪಿಸಿದರು.

ಮತ ಪ್ರತಿಷ್ಠಾಪಕರೆಂದರೆ ವೇದವ್ಯಾಸರಿಂದ ರಚಿತವಾದ ಬ್ರಹ್ಮಸೂತ್ರಗಳಿಗೆ ತಮ್ಮದೇ ಭಾಷ್ಯರಚನೆ ಮಾಡಿದರೆಂದರ್ಥ. ಶ್ರೀಮದಾನಂದತೀರ್ಥಾಚಾರ್ಯರಿಗಿಂತಲೂ ಹಿಂದೆ ೨೧ ಭಾಷ್ಯಗಳು ರಚಿತವಾಗಿದ್ದವು. ಅಂತಹ ಈ ಎಲ್ಲಾ ಭಾಷ್ಯಗಳನ್ನು ಖಂಡಿಸಿ ಶ್ರೀವೇದವ್ಯಾಸರಿಗೆ ಸಮ್ಮತವಾದ ಭಾಷ್ಯವನ್ನು ಆಚಾರ್ಯರು ರಚಿಸಿದರು. ಅನಂತರ ದೊಡ್ಡ ಬದರಿಗೆ ತೆರಳಿ ಅದನ್ನು ವ್ಯಾಸರೂಪಿಯಾದ ಶ್ರೀಹರಿಗೆ ಅರ್ಪಿಸಿದರು. ಆಚಾರ್ಯರಿಂದ ಪ್ರತಿಷ್ಠಾಪಿಸಿದ ವೈಷ್ಣವಮತವು ಅನಾದಿಯಿಂದ ಪ್ರಾಪ್ತವಾದದ್ದು, ಸಾಕ್ಷಾತ್ ಶ್ರೀಹರಿಯಿಂದ ತತ್ತ್ವೋಪದೇಶವನ್ನು ಬಹಳ ಪೂರ್ವದಲ್ಲೇ ಶ್ರೀಚತುರ್ಮುಖನು ಪಡೆದನು. ಆ ಬ್ರಹ್ಮದೇವರಿಂದ ಪ್ರಾಪ್ತವಾದ ಸಿದ್ಧಾಂತವೇ ಅನಾದಿಯಾದ ವೈಷ್ಣವ ಸಿದ್ಧಾಂತವು. ಅಂತಹ ಪರಂಪರೆಯಲ್ಲಿ ಪ್ರಾಪ್ತರಾದವರೇ ಶ್ರೀಅಚ್ಯುತಪ್ರೇಕ್ಷಾಚಾರ್ಯರು. ಅವರಿಂದ ಆಶ್ರಮವನ್ನು ಸ್ವೀಕರಿಸಿದವರೇ ಶ್ರೀಮದಾನಂದತೀರ್ಥ ಭಗವತ್ಪಾದರು. ಶ್ರೀಅಚ್ಯುತಪ್ರೇಕ್ಷರಿಗೆ ಪರಂಪರೆಯಲ್ಲಿ ಪ್ರಾಪ್ತವಾದ ವೈಷ್ಣವ ಸಿದ್ಧಾಂತದ ತತ್ತ್ವವನ್ನು ಸ್ಥಿರಗೊಳಿಸಿ ಪ್ರತಿಷ್ಠಾಪಿಸಿದರು.

೫. **ಅತ ಏವ ಭಗವತ್ಪರಮಾನುಗ್ರಹಪಾತ್ರಭೂತಾನಾಂ ಸರ್ವದಾ ಭಗವದಾಜ್ಞಯಾ ಭಗವತ್ಸನ್ನಿಧೌ ಪೂಜ್ಯಾನಾಂ ತಥಾ ಭಗವತಾದತ್ತವರಾಣಾಂ.....**

**ಪ್ರತಿಪದಾರ್ಥ** :- ಅತ ಏವ-ಹಾಗೆ ಮಾಡಿದ ಕಾರಣದಿಂದಲೇ, ಭಗವತ್ಪರ-ಮಾನುಗ್ರಹಪಾತ್ರ ಭೂತಾನಾಂ-ಹರಿಯ ವಿಶೇಷಾನುಗ್ರಹಕ್ಕೆ ಪಾತ್ರಭೂತರಾದ, ಸರ್ವದಾ ಎಲ್ಲಾ ಕಾಲದಲ್ಲೂ ಭಗವದಾಜ್ಞಯಾ - ಹರಿಯಾಜ್ಞೆಯಿಂದ ಭಗವತ್ಸನ್ನಿಧೌ-ಹರಿಯ ಸಮ್ಮುಖದಲ್ಲಿ ಪೂಜ್ಯಾನಾಂ-ಭಕ್ತರಿಂದ ಪೂಜಿಸಲ್ಪಡುವ, ತಥಾ-ಹಾಗೆ, ಭಗವತಾ-ಹರಿಯಿಂದ ದತ್ತವರಾಣಾಂ-ಕೊಡಲ್ಪಟ್ಟ ವರವುಳ್ಳವ-ರಾದವರು ಶ್ರೀ ಆನಂದತೀರ್ಥ ಭಗವತ್ಪಾದಾಚಾರ್ಯರು.

**ತಾತ್ಪರ್ಯ** :- ಶ್ರೀ ಹರಿಯ ಭೂಭಾರ ಹರಣವೇ ಮೊದಲಾದ ಕಾರ್ಯಗಳಲ್ಲಿ ಪ್ರಧಾನಾಂಗರಾದ ಶ್ರೀಮುಖ್ಯವಾಯುದೇವರು, ಹನುಮ, ಭೀಮ, ಮಧ್ವ ಎಂಬ ಮೂರು ಅವತಾರಗಳಲ್ಲಿಯೂ ಶ್ರೀಹರಿಯು ಒಪ್ಪಿಸಿದ ಕಾರ್ಯವನ್ನು ಹರಿಗೆ ಪ್ರೀತಿಯಾಗುವಂತೆ ಮಾಡಿದ್ದಾರೆ. ತನ್ಮೂಲಕ ಶ್ರೀಹರಿಗೆ ಮುಖ್ಯಪ್ರೀತಿಪಾತ್ರರಾಗಿದ್ದಾರೆ.

ಶ್ರೀವಾಯುದೇವರ ಮೊದಲ ಅವತಾರವಾದ ಹನುಮದವತಾರದಲ್ಲಿ ಅವರು ಅಸದೃಶವಾಗಿ ಸೇವೆ ಸಲ್ಲಿಸಿದ್ದಾರೆ. ಅವರು ಮಾಡಿದ ಸೇವೆಯನ್ನು ಮೆಚ್ಚಿದ ಶ್ರೀರಾಮನು ಅವರಿಗೆ ಮೋಕ್ಷ ಕೊಟ್ಟರೂ ಸಾಲದೆಂದು ಸಹಭೋಗವನ್ನು ದಯಪಾಲಿಸಿದ್ದಾರೆ. ಸ್ವೇಚ್ಛೆಯಿಂದ ಮುಕ್ತಸ್ಥಾನವನ್ನು ಪ್ರವೇಶಿಸಿ ತನ್ನ ದರ್ಶನ ಪಡೆಯುವ ಪರಮ ಸೌಭಾಗ್ಯವನ್ನು ದಯಪಾಲಿಸಿದ್ದಾರೆ. ಅಲ್ಲದೆ ರಾಮರೂಪವನ್ನು ಶ್ರೀವಾಯುದೇವರಿಗೇ ಮೀಸಲಿಟ್ಟು ನಿತ್ಯ ದರ್ಶನ ಭಾಗ್ಯವನ್ನು ಕೊಟ್ಟಿದ್ದಾನೆ. ಈ ವಿಷಯವನ್ನು ನಾರಾಯಣ ಪಂಡಿತಾಚಾರ್ಯರು ತಮ್ಮ ಸುಮಧ್ವವಿಜಯ ಗ್ರಂಥದಲ್ಲಿ ''**ಅಸಾವಿದಾನೀಂ ಚ ನಿಶೇವಮಾಣೋ । ರಾಮಂ ಪತಿಂ ಕಿಂ ಪುರುಷೇ ಕಿಲಾಸ್ತೇ ॥**''ಎಂದು ಸಂಗ್ರಹಿಸಿದ್ದಾರೆ. ಎಲ್ಲಾ ಜೀವರಿಗಿಂತಲೂ ಅತ್ಯಧಿಕವಾದ ನಿತ್ಯಪ್ರವೃದ್ಧವಾಗುವ ಭಕ್ತಿಯನ್ನು ಶ್ರೀಹರಿಯು ಶ್ರೀಹನುಮಂತದೇವರಿಗೆ ಕೊಟ್ಟಿದ್ದಾನೆ. ಇದೇ ಅಲ್ಲವೇ ಶ್ರೀಹರಿಯು ಶ್ರೀಹನುಮನಿಗೆ ಮಾಡಿದ ಪರಮಾನುಗ್ರಹ. ಅದನ್ನು ಮಂತ್ರಾಲಯ ಪ್ರಭುಗಳು **'ಅತ ಏವ ಭಗವತ್ಪರಮಾನುಗ್ರಹ ಪಾತ್ರಭೂತಾನಾಂ'** ಎಂದು ಸಂಗ್ರಹಿಸಿದ್ದಾರೆ.

ಶ್ರೀವಾಯುದೇವರ ತಮ್ಮ ದ್ವಿತೀಯ ಅವತಾರವಾದ ಭೀಮಸೇನ ದೇವರಾಗಿ ಬಂದಾಗಲೂ ಕೂಡ ಶ್ರೀಕೃಷ್ಣನಿಗೆ ಭೂಭಾರಹರಣಕಾರ್ಯದಲ್ಲಿ ಪ್ರಧಾನಾಂಗಭೂತವಾದ ಸೇವೆಯನ್ನು ಅರ್ಪಿಸಿದ್ದಾರೆ. ಕೃಷ್ಣದ್ವೇಷಿಯಾದ ದುರ್ಯೋಧನಾದಿ ೧೦೦ ಜನರನ್ನು, ಕೀಚಕ, ಉಪಕೀಚಕರೇ ಮೊದಲಾದವರನ್ನು ಭೀಮಸೇನದೇವರು ಸಂಹರಿಸಿದ್ದಾರೆ. ಬಕಾಸುರ, ಕಿರ್ಮಿರ, ಜರಾಸಂದಾದಿ ವಿಷ್ಣು ವೈಷ್ಣವ ದ್ವೇಷಿಗಳಾದ ರಾಜರನ್ನು ಯುದ್ಧವೆಂಬ ಯಜ್ಞದಲ್ಲಿ ಶ್ರೀಕೃಷ್ಣಪ್ರೀತಿಗಾಗಿ ಬಲಿ ಕೊಟ್ಟಿದ್ದಾರೆ. ಮಹಾಭಾರತ ಸಂಗ್ರಾಮದಲ್ಲಿ ಶ್ರೀಹರಿ ಭಕ್ತಾಗ್ರಣಿಗಳಾದ ಶ್ರೀಭೀಮಸೇನದೇವರು ಮಾಡಿದ ದುಷ್ಟವಧಾದಿರೂಪ ಸೇವೆಯು ಎಂತಹ ಶ್ರೀಹರಿಯ ಪ್ರೀತಿಕರ ಎಂಬುದನ್ನು ಪಂಡಿತಾಚಾರ್ಯರು ತಿಳಿಸುತ್ತಾ "**ಕಿಮುವದ ಭಗವನ್ ರಾಜಸೂಯಾಶ್ವಮೇಧೇ**" ಶ್ರೀಕೃಷ್ಣನಿಗೆ ಧರ್ಮರಾಜಾದಿಗಳು ಮಾಡಿದ ರಾಜಸೂಯ-ಅಶ್ವಮೇಧಾದಿ ದೊಡ್ಡ ದೊಡ್ಡ ಯಜ್ಞಯಾಗಗಳಿಗಿಂತ ಶ್ರೀಭೀಮಸೇನ ದೇವರು ಮಾಡಿದ ಬಕಾ, ಜರಾಸಂಧಾದಿಗಳ ವಧಾರೂಪ ಯುದ್ಧಾಖ್ಯ ಯಜ್ಞವೇ ಶ್ರೀಹರಿಗೆ ಅತ್ಯಂತ ಪ್ರೀತಿಕಾರಕವೆಂದು ತಮ್ಮ ಹರಿವಾಯುಸ್ತುತಿಯಲ್ಲಿ ತಿಳಿಸಿದ್ದಾರೆ. ಆಗಲೂ ಶ್ರೀಭೀಮ ಮಾಡಿದ ಅತ್ಯದ್ಭುತ ಸೇವಾದಿಗಳನ್ನು ಕಂಡ ಶ್ರೀಕೃಷ್ಣನು "**ಮಮ ಪ್ರಾಣಾಹಿ ಪಾಂಡವಾಃ**" ಹಾಗೂ "**ಭೀಮಸೇನಂ ಸಮೋನಾಸ್ತಿ ಸೇನಯೋಃರುಭಯೋರಪಿ**" ಎನ್ನುವ ಮೂಲಕ ಭೀಮಸೇನನಲ್ಲಿ ಶ್ರೀಹರಿಯು ಪರಮಾನುಗ್ರಹ ಮಾಡಿದರೆ ಅದೇ ಶ್ರೀವಾಯುದೇವರು ಈ ಕಲಿಯುಗದಲ್ಲಿ ಶ್ರೀಹರಿಯ ಆಜ್ಞಾನುಸಾರ ಕರ್ಮಭೂಮಿಯಾದ ಭರತಭೂಮಿಯಲ್ಲಿ ಶ್ರೀಮದಾನಂದತೀರ್ಥರಾಗಿ ಅವತರಿಸಿ ಮಾಯಾವಾದವೇ ಮೊದಲಾದ ಸಕಲ ದುಷ್ಟಮತಗಳನ್ನು ಖಂಡಿಸಿ, ಸದ್ವೈಷ್ಣವ ಸಿದ್ಧಾಂತವನ್ನು ಜಗತ್ತಿನಲ್ಲಿ ಮಂಡಿಸಿ ಶ್ರೀಹರಿಯ ಕರುಣೆಗೆ ಪಾತ್ರರಾಗಿದ್ದಾರೆ. ಈ ಎಲ್ಲಾ ವಿಷಯವನ್ನು ಶ್ರೀಮಂತ್ರಾಲಯ ಮಹಾಪ್ರಭುಗಳು ಈ ಎಲ್ಲಾ ವಿಷಯವನ್ನು "**ಅತ ಏವ ಭಗವತ್ ಪರಮಾನುಗ್ರಹ ಪಾತ್ರ ಭೂತಾನಾಂ**" ಎಂದಿದ್ದಾರೆ. ಅಂತಹ

ಶ್ರೀವಾಯುದೇವರು, ಶ್ರೀಹರಿಯ ಕರುಣೆ ಹಾಗೂ ಅನುಗ್ರಹಬಲದಿಂದ ಶ್ರೀಹರಿಯ ಸನ್ನಿಧಿಯಲ್ಲಿ ಸದಾ ಸರ್ವರಿಂದಲೂ ಪೂಜ್ಯರಾದವರೂ ಆಗಿದ್ದಾರೆ. ಶ್ರೀಹರಿಯು ಬ್ರಹ್ಮಾಂಡದಲ್ಲಿ ಎಲ್ಲೆಡೆಯಲ್ಲಿ ವ್ಯಾಪ್ತನಾಗಿರುವಂತೆ ಶ್ರೀವಾಯುದೇವರೂ ಕೂಡ ಶ್ರೀಹರಿಯ ವಿಶೇಷಾನುಗ್ರಹ ಬಲದಿಂದಲೇ ಎಲ್ಲೆಡೆಯಲ್ಲಿಯೂ ವ್ಯಾಪ್ತರಾಗಿದ್ದಾರೆ. ಅಂತಹ ವಾಯುದೇವರ ಅವತಾರಿಭೂತರಾದವರೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು.

೬. **ದ್ವಾತ್ರಿಂಶಲ್ಲಕ್ಷಣೋಪೇತಾನಾಂ ತಥಾ ಸಮಗ್ರಗುರುಲಕ್ಷಣೋ-ಪೇತಾನಾಂ ಅಸಂಶಯಾನಾಂ ಪ್ರಸಾದಮಾತ್ರೇಣ ಸ್ವಭಕ್ತಾಶೇಷ-ಸಂಶಯಚ್ಛೇತ್ತೃಣಾಂ....**

**ಪ್ರತಿಪದಾರ್ಥ :-** ದ್ವಾತ್ರಿಂಶಲಕ್ಷಣೋಪೇತಾನಾಂ – ೩೨ ಸಲ್ಲಕ್ಷಣಗಳಿಂದ ಕೂಡಿದವರಾದ, ತಥಾ–ಹಾಗೆಯೇ ಸಮಗ್ರಗುರುಲಕ್ಷಣೋಪೇತಾನಾಂ ಗುರುಗಳಿಗೆ ಇರಬೇಕಾದ ಸಕಲ ಲಕ್ಷಣಗಳು ಇರುವವರಾದ, ಅಸಂಶಯಾನಾಂ–ಸಂಶಯ ರಹಿತ ನಿಶ್ಚಿತ ತತ್ವಜ್ಞಾನವುಳ್ಳವರಾದ ಪ್ರಸಾದ ಮಾತ್ರೇಣ–ಪ್ರಸನ್ನತೆಯಿಂದ ಮಾಡುವ ಅನುಗ್ರಹ ಮಾತ್ರದಿಂದಲೇ ಸ್ವಭಕ್ತ–ತಮ್ಮ ಭಕ್ತರ, ಅಶೇಷ ಸಂಶಯಚ್ಛೇತೃಣಾಂ–ಸಕಲ ಸಂಶಯವನ್ನು ಪರಿಹರಿಸುವರಾದ.

**ತಾತ್ಪರ್ಯ :-** ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಸಜ್ಜನರಿಗೆ ಮುಖ್ಯ ಗುರುಗಳಾಗಿದ್ದಾರೆ. ಅಂತಹ ಮುಖ್ಯ ಗುರುಗಳಾದ ಶ್ರೀವಾಯುದೇವರಲ್ಲಿ ಲಕ್ಷಣಶಾಸ್ತ್ರಾನುಸಾರಿಯಾಗಿ ಗುರುಗಳಲ್ಲಿ ಇರಬೇಕಾದ ೩೨ ಲಕ್ಷಣಗಳಿಂದ ಕೂಡಿದ್ದಾರೆ. ಅಲ್ಲದೆ ಸಂಶಯವೇ ಸುಳಿಯದ ಜ್ಞಾನಭೂಯಿಷ್ಠರೂ ಆಗಿದ್ದಾರೆ. ಅದನ್ನೇ ಆಚಾರ್ಯರು ತಮ್ಮ ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ತಿಳಿಸುತ್ತ, "**ಅಸಂಶಯಃ ಸಂಶಯಛಿದ್ಗುರುರುಕ್ತೋ ಮನೀಷಿಭಿಃ**" ಎಂದು ಅಪ್ಪಣೆ ಕೊಡಿಸಿದ್ದಾರೆ. ಈ ಲಕ್ಷಣವನ್ನು ಜೀವರಾಶಿಯಲ್ಲಿ ಮುಖ್ಯವಾಗಿ ಹೊಂದಿರುವವರು ಬ್ರಹ್ಮದೇವರು. ಅವರು ಎಲ್ಲರಿಗೂ ಎಲ್ಲಾ

ಕಾಲದಲ್ಲಿಯೂ ಮುಖ್ಯ ಗುರುಗಳಾಗಿದ್ದಾರೆ. ಸೋತ್ತಮರು ಎಲ್ಲಾ ಕಾಲಗಳಲ್ಲಿಯೂ ಸ್ವಾವವರರಿಗೆ ಗುರುಗಳೇ ಆಗಿರುತ್ತಾರೆ. ಹೀಗೆ ಜಗದ್ಗುರುವಿನ ಲಕ್ಷಣವನ್ನು ತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು **''ಷಣ್ಣವರ್ತ್ಯಂಗುಲೀಯು........ಯುರ್ತತಃ''** ಎಂದಿದ್ದಾರೆ. ಅರ್ಥಾತ್ ಪಾದದಿಂದ ನೆತ್ತಿಯವರೆಗೆ ೯೬ ಅಂಗುಲ ಎತ್ತರದ ದೇಹ ೪೮ ಅಂಗುಲ ಸುತ್ತಳತೆಯು ಹಾಗೂ ೩೨ ಸಲಕ್ಷಣಭರಿತವು ಆಗಿರಬೇಕೆಂದಿದ್ದಾರೆ. ಸಂಶಯವೇ ಸುಳಿಯದ ಸಮೀಚೀನವಾದ ಜ್ಞಾನ ಹಾಗೂ ಶಾಸ್ತ್ರೀಯ ಲಕ್ಷಣ ದೇಹ ಈ ಎರಡೂ ಲಕ್ಷಣಗಳು ಬ್ರಹ್ಮವಾಯುಗಳಲ್ಲಿ ಮಾತ್ರ ಇರುತ್ತದೆ. ಇದನ್ನೇ ಮಂತ್ರಾಲಯ ಮಹಾಪ್ರಭುಗಳು **''ಸಮಗ್ರ ಗುರು ಲಕ್ಷಣೋಪೇತಾನಾಂ''** ಎಂದಿದ್ದಾರೆ. ಲಕ್ಷಣಶಾಸ್ತ್ರಪ್ರಕಾರ ಹಾಗೂ ವಾಯುದೇವರಲ್ಲಿನ ೩೨ ಲಕ್ಷಣಗಳೆಂದರೆ : **ಪಂಚ ದೀರ್ಘ, ಪಂಚಸೂಕ್ಷ್ಮ, ಸಪ್ತಶಾಸ್ತ್ರ ಷಡುನ್ನತ, ತ್ರಿಪೃಥು, ತ್ರಿಷು ಗಂಭೀರೋ ದ್ವಾತ್ರಿಂವಕ್ಷಣಸ್ತ್ವಿತಿ ॥**

೧) ೫ ದೀರ್ಘಗಳು : ಬುಜ, ನೇತ್ರ, ಹನು, ಜಾನು, ನಖ

೨) ೫ ಸೂಕ್ಷ್ಮಗಳು : ೧. ತ್ವಕ್ ೨. ಕೇಶ ೩. ಬೆರಳು ೪. ದಂತ ೫. ಗೆಣ್ಣಿನ ಮಧ್ಯಭಾಗ

೩) ೭ ಕೆಂಪುಗಳು : ೧. ಅಂಗೈ ೨. ಅಂಗಾಲು ೩. ಕಣ್ಣಿನತುದಿ ೪. ಕಾಲು ೫. ನಾಲಿಗೆ ೬. ಕೆಳತುಟಿ ೭. ಕೈಯುಗುರು.

೪) ೬ ಉನ್ನತಗಳು : ೧. ಎದೆ ೨. ಹೊಟ್ಟೆ ೩. ಹಣೆ ೪. ಹೆಗಲು ೫. ಕರ ೬. ಮುಖ ೫. ೩ ವಿಸ್ತಾರವಾಗಿರಬೇಕಾದದ್ದು.

೫) ೧. ಲಲಾಟ ೨. ಸೊಂಟ ೩. ವೃಕ್ಷ

೬) ೩ ಚಿಕ್ಕವಾಗಿರಬೇಕಾದುದು : ೧. ಜಂಘ ೨. ಕಂಠ ೩. ಶಿಶ್ನ

೭) ೩ ಗಂಭೀರವಾದದ್ದು : ೧. ಸ್ವಭಾವ ೨. ಸ್ವರ ೩. ನಾಭಿ.

ಈ ೩.೨ ಲಕ್ಷಣದ ದೇಹಗಳು ಋಜಗಣದ ಜೀವರಿಗೆ ಮಾತ್ರ ಮೀಸಲು. ಶ್ರೀಹರಿಯಲ್ಲಿ ಈ ಬಗೆಯ ಲಕ್ಷಣಗಳಲ್ಲದೆ ಅಚಿಂತ್ಯವಾದ ಅನಂತವಾದ ಸಲ್ಲಕ್ಷಣಗಳು ಜೀವ-ವಿಲಕ್ಷಣವೂ ಹಾಗೂ ಪೂರ್ಣವೂ ಆಗಿವೆ.

ಅಲ್ಲದೆ "**ಪ್ರಸಾದ ಮಾತ್ರೇಣ ಸ್ವಭಕ್ತ ಅಶೇಷ ಸಂಶಯಛೇತೃಣಾಂ**" ಎಂದಿದ್ದಾರೆ. ಕೇವಲ ತಮ್ಮ ಅನುಗ್ರಹ ಪ್ರಸಾದ ಮಾತ್ರದಿಂದಲೇ ತಮ್ಮ ಭಕ್ತರ ಅಶೇಷವಾದ ಸಂಶಯಗಳನ್ನು ನಾಶ ಮಾಡುವ ಸಾಮರ್ಥ್ಯ ಉಳ್ಳವರು ಎಂದಿದ್ದಾರೆ. ಇಲ್ಲಿ ಮಾತ್ರ ಎಂದರೆ ಕೇವಲ ಗುರುಪ್ರಸಾದದಿಂದ ಶಿಷ್ಯರ ಸಂಶಯ ಪರಿಹಾರ ಎಂದಷ್ಟೇ ಅಲ್ಲ. ಕಿರಿಯರು ಇತರ ಶಾಸ್ತ್ರಶ್ರವಣ ಮನನಾದಿ ಪರಿಕರಗಳು ಇದ್ದು ದೊರೆಯಬಹುದಾದ ಫಲಕ್ಕಿಂತಲೂ ಗುರುಗಳ ಅನುಗ್ರಹದಿಂದ ದೊರೆಯಬಹುದಾದ ಫಲ ಹೆಚ್ಚೆಂದು ತಿಳಿಸಿದ್ದಾರೆ. ನಿಶ್ಚಿತ ತತ್ವಜ್ಞಾನ ಗುರುವಿನ ಅನುಗ್ರಹದಿಂದಲೇ ದೊರೆಯುವುದು. ಅನ್ಯ ಮಾರ್ಗವಿಲ್ಲ. ಅದನ್ನೇ "**ಗುರುಪ್ರಸಾದೋ ಬಲವಾನ್ ನ ತಸ್ಮಾತ್ ಬಲವತ್ತರಃ**" ಎಂದಿದ್ದಾರೆ.

೭. **ಪ್ರಣವಾದ್ಯಶೇಷವೈಷ್ಣವಮಂತ್ರೋದ್ಧಾರಕಾಣಾಂ ಸರ್ವದಾ ಸರ್ವವೈಷ್ಣವಮಂತ್ರಜಾಪಕಾನಾಂ ಸಂಸಿದ್ಧಸಪ್ತಕೋಟಿಮಹಾ-ಮಂತ್ರಾಣಾಂ.....**

**ಪ್ರತಿಪದಾರ್ಥ :-** ಪ್ರಣವಾದಿ–ಪ್ರಣವವೇ ಮೊದಲಾದ ಆಶೇಷವೈಷ್ಣವಮಂತ್ರ – ಎಲ್ಲಾ ಹರಿಪ್ರೀತಿಕಾರಕವಾದ ಮಂತ್ರಗಳ, ಉದ್ಧಾರಕಾಣಾಂ–ಪ್ರದರ್ಶಿಸಿದವರಾದ, ಸರ್ವದಾ – ಎಲ್ಲ ಕಾಲದಲ್ಲಿಯೂ, ಸರ್ವ–ಎಲ್ಲಾ ವೈಷ್ಣವ ಮಂತ್ರ ಜಾಪಕಾನಾಂ–ವಿಷ್ಣುಪ್ರೀತಿ- ಕಾರಕವಾದ ಮಂತ್ರಗಳನ್ನು ಜಪಿಸುವವರಾದ, ಸಂಸಿದ್ಧ ಸಪ್ತಕೋಟಿ ಮಹಾಮಂತ್ರಾಣಾಂ, ಏಳು ಕೋಟಿ ಮಹಾಮಂತ್ರಗಳ ಸಿದ್ಧಿಯುಳ್ಳವರಾದ.

**ತಾತ್ಪರ್ಯ :-** ಪ್ರಣವವೇ ಮೊದಲಾಗಿರುವ ಅಷ್ಟಮಹಾಮಂತ್ರಗಳು ಶ್ರೀಹರಿಗೆ ಅತ್ಯಂತ ಪ್ರೀತ್ಯಾಸ್ಪದವಾದದ್ದು. ಈ ಮಂತ್ರಗಳ ಉಪಾಸನೆಯಿಂದಾಗಿ

ಶ್ರೀಹರಿಯು ಪ್ರೀತನಾಗುತ್ತಾನೆ. "**ಕಿಮಲಭ್ಯಂ ಭಗವತಿ ಪ್ರಸನ್ನ ಶ್ರೀನಿಕೇತನೇ**" ಶ್ರೀ ವಿಷ್ಣುವು ಪ್ರಸನ್ನನಾದಮೇಲೆ ಅಲಭ್ಯವಾದದ್ದು ಯಾವುದಿದೆ. ಅಂತಹ ಅಷ್ಟಮಹಾಮಂತ್ರಗಳೆಂದರೆ ೧) ಪ್ರಣವ (ಭೂಃ, ಭುವಃ; ಸ್ವಃ) ೨) ಭೂರ್ಭುವಸ್ವಃ ೩) ನಾರಾಯಣಾಷ್ಟಾಕ್ಷರ ೪. ವಾಸುದೇವದ್ವಾದಶಾಕ್ಷರ ೫) ಗಾಯತ್ರಿ ೬) ಮಾತೃಕಾ ೭) ಪುರುಷಸೂಕ್ತ ೮) ವಿಷ್ಣುಷಡಕ್ಷರ.

ಶ್ರೀಮದಾನಂದತೀರ್ಥ ಭಗವತ್ಪಾದರು ತಮ್ಮ ತಂತ್ರಸಾರಗ್ರಂಥದಲ್ಲಿ ಇವುಗಳ ವಿವರಣೆಯನ್ನು ಕೊಟ್ಟು ಇದರ ಜೊತೆಗೆ ವರಾಹ ನರಸಿಂಹಾದಿ ಇತರೆ ವೈಷ್ಣವ ಶ್ರೀಹರಿಪ್ರೀತಿಕಾರಕವಾದ ಮಂತ್ರಗಳನ್ನು ಉದ್ಧರಿಸುವರು. ಇಂತಹ ಪ್ರಣವವೇ ಮೊದಲಾದ ಆಶೇಷ ವೈಷ್ಣವೋಪಾಸನೆಗೆ ಯೋಗ್ಯವಾದ ಎಲ್ಲಾ ಮಂತ್ರಗಳನ್ನು ಸರ್ವದಾ ಜಪಿಸುವ ಅಧಿಕಾರಿಗಳು ಶ್ರೀ ವಾಯುದೇವರು.

ಇನ್ನು ವೈಷ್ಣವಮಂತ್ರವೆಂದರೆ ವಿಷ್ಣುಭಕ್ತರಾದ ಸಕಲ ಸಜ್ಜನರಿಂದ ಸೇವ್ಯವಾದ ಮಂತ್ರವೆಂದರ್ಥ. ವಿಷ್ಣುವಿನ ಪ್ರಸನ್ನತೆ ಕಾರಣವಾದವುಗಳು. ಹಾಗೂ ಆತನ ಮಹಿಮಾತಿಶಯಗಳನ್ನು ಪ್ರತಿಪಾದಿಸುವ ಮಂತ್ರಗಳೇ ವೈಷ್ಣವ ಮಂತ್ರಗಳು.

ಅಂತಹ ವೈಷ್ಣವ ಮಂತ್ರಗಳನ್ನು ಶ್ರೀವಾಯುದೇವರು ಅಲ್ಪಮಾನವರ ಮತಿಗೆ ನಿಲುಕದಂತೆ ಸರ್ವದಾ ಜಪಿಸುವರು ಆಗಿದ್ದಾರೆ. ಅದನ್ನೇ ಪಂಡಿತಾಚಾರ್ಯರು ತಮ್ಮ ಶ್ರೀ ಸುಮಧ್ವವಿಜಯದಲ್ಲಿಯೂ ತಿಳಿಸುತ್ತ **ನಹಿ ಹರಿಂ ಸತತಂ ನ ನಮತ್ಯಸೌ । ನ ಚನ ಪಶ್ಯತಿ ನಾಪಿ ನ ವಂದತೇ ॥ ಅಪಿ ತಥೇತಿ ವಿದಾಯ ವಿಶೇಷತಃ । ಸ ನನು ಸಾಧು ಜನಾನ್ ಸಮಶಿಕ್ಷಯತ್ ॥** ಶ್ರೀಹರಿಯನ್ನೇ ಸದಾ ನಮಸ್ಕರಿಸುತ್ತಿಲ್ಲವೆಂದಿಲ್ಲಾ. ಸದಾ ನಮಸ್ಕರಿಸುತ್ತೇನೆ. ಸದಾ ಹರಿಯನ್ನು ನೋಡುವುದಿಲ್ಲ ಎಂದಿಲ್ಲಾ. ಸದಾ ನೋಡುತ್ತೇನೆ. ಸದಾ ಸ್ತೋತ್ರ ಮಾಡುವುದಿಲ್ಲ ಎನ್ನುವಂತಿಲ್ಲಾ ಶ್ರೀಹರಿಯನ್ನು ಸದಾ ಸ್ತುತಿಸುತ್ತೇನೆ.

ಒಂದೊಂದು ಮಂತ್ರಗಳ ಸಿದ್ಧಿ ಪಡೆದ ಯೋಗಿಗಳು ಮಾಡುವ ಅತಿಮಾನುಷ ಕೃತಿಗಳೇ ಅಲ್ಪರಿಗೆ ಕಲ್ಪನಾತೀತವಾಗುವುದಾದರೆ ಪ್ರಣವಾದಿ ವೈಷ್ಣವ

ಮಂತ್ರದಿಂದ ಲಭಿಸಬಹುದಾದ ಸಿದ್ಧಿಯನ್ನು ಕಲ್ಪಿಸಿಕೊಳ್ಳಲು ನಮ್ಮಂತಹ ಅಲ್ಪರಿಗೆ ಸಾಧ್ಯವಿಲ್ಲ ಎಂದಮೇಲೆ ಶ್ರೀಆಚಾರ್ಯರು ಸಂಸಿದ್ಧಿ ಸಪ್ತಕೋಟಿ ಮಹಾಮಂತ್ರ ಜಪಮಾಡುವ ಮಹಾನುಭಾವರ ಮಹಿಮೆಯನ್ನು ಮಾನವರಾದ ನಾವು ಅರಿಯಲು ಸಾಧ್ಯವಿಲ್ಲ. ಶ್ರೀವಾಯುದೇವರ ಈ ಬಗೆಯ ಎಲ್ಲಾ ಮಹಿಮೆಗಳನ್ನು ಮಂತ್ರಾಲಯ ಪ್ರಭುಗಳು ತಿಳಿಸುತ್ತಾ **''ಸರ್ವವೈಷ್ಣವ ಮಂತ್ರ ಜಾಪಕಾನಾಂ''** ಎಂದಿದ್ದಾರೆ.

**೮. ಭಗವತಿ ಭಕ್ತ್ಯತಿಶಯೇನ ಭಗವದುಪಾಸನಾರ್ಥಂ ಸ್ವೇಚ್ಛಯಾ ಗೃಹೀತ ರೂಪಾಣಾಂ.....**

**ಪ್ರತಿಪದಾರ್ಥ** :- ಭಗವತಿ–ಷಡ್ಗುಣಗಳಿಂದ ಪರಿಪೂರ್ಣನಾದ ಶ್ರೀಹರಿಯಲ್ಲಿನ ಭಕ್ತತಿಶಯೇನ- ಹೆಚ್ಚಾದ ಭಕ್ತಿಯಿಂದ, ಭಗವದುಪಾಸನಾರ್ಥಂ – ಶ್ರೀಹರಿಯನ್ನು ಉಪಾಸಿಸುವ ಸಲುವಾಗಿ, ಸ್ವೇಚ್ಛಯಾ ಗೃಹೀತ, ಇಚ್ಛೆಗೆ ಅನುಸಾರವಾಗಿ ತೆಗೆದುಕೊಳ್ಳಲ್ಪಟ್ಟ ರೂಪಾಣಾಂ–ಹರಿಮೂರ್ತಿಗಳು ಉಳ್ಳವರಾದ.

**ತಾತ್ಪರ್ಯ** :- ಶ್ರೀವಾಯುದೇವರು ಯಾವುದೇ ಒಂದು ಭಗವದ್ರೂಪವನ್ನು ಚಿಂತಿಸುವಾಗಲೂ, ಆತನಲ್ಲಿಯ ಅನಂತ ರೂಪಗುಣ, ಕ್ರಿಯಾದಿಗಳನ್ನು ಚಿಂತಿಸುವ ಸಾಮರ್ಥ್ಯ ಉಳ್ಳವರು. ಹಾಗೆ ಹರಿಯ ಮಹಿಮಾತಿಶಯವನ್ನು ಚಿಂತಿಸುತ್ತ ಆತನಲ್ಲಿ ಅತಿಶಯವಾದ ಅಂದರೆ ಕ್ಷಣಕ್ಷಣಕ್ಕೆ ಅಭಿವೃದ್ಧಿ ಹೊಂದುವ ಭಕ್ತಿಯನ್ನು ಪಡೆದು ಸ್ವೇಚ್ಛಾನುಸಾರಿಯಾಗಿ ಉಪಾಸನೆಗಾಗಿ ಭಗವಂತನ ಮೂರ್ತಿಗಳನ್ನು ಪಡೆದ ಮಹಾನುಭಾವರು ಶ್ರೀಮದಾನಂದತೀರ್ಥರು. ಅವರ ಈ ಬಗೆಯ ಭಕ್ತಿಯು ಮುಕ್ತಿಯ ಪರ್ಯಂತರವಾಗಿಯೂ ಇರುತ್ತದೆ.

**೯. ತತ್ರ ತತ್ರ ಪೃಥಕ್ ಪೃಥಕ್ ಭಗವತೋಽನಂತರೂಪೇಷು ಪೃಥಕ್ ಪೃಥಗ್ವೇದೋಕ್ತ ತದನುಕ್ತಭಾರತೋಕ್ತ ತದನುಕ್ತ ಸಂಪ್ರದಾಯಾಗತ**

**ಸ್ವೇತರ ಸ್ವಾಭಿನ್ನ ತಯಾಪ್ಯಶೇಷಶಕ್ತಿವಿಶೇಷಾಭ್ಯಾಂ ಪೃಥಗ್ವ್ಯವಹಾರ-ವಿಷಯ ಸರ್ವಸಾಮರ್ಥ್ಯೋಪೇತ ನಿರವಧಿಕಾನಂತಾನವದ್ಯ-ಕಲ್ಯಾಣಗುಣ ಪರಿಪೂರ್ಣಾನಂತ ಗುಣೋಪಸಂಹರ್ತೄಣಾಂ.....**

**ಪ್ರತಿಪದಾರ್ಥ :-** ತತ್ರತತ್ರ–ಆಯಾಯ ಹರಿಮೂರ್ತಿಗಳಲ್ಲಿ ಪೃಥಕ್ ಪೃಥಕ್–ಬೇರೆ ಬೇರೆಯಾಗಿ ಇರುವ, ಭಗವತಃ–ಶ್ರೀಹರಿಯ, ಅನಂತರೂಪೇಷು – ಅನಂತ ರೂಪಗಳಲ್ಲಿ, ಪೃಥಕ್ಪೃಥಕ್–ಪ್ರತಿಯೊಂದರಲ್ಲಿಯೂ, ವೇದೋಕ್ತ–ವೇದದಲ್ಲಿ ಹೇಳಿದ ತದನುಕ್ತ– ಅದರಲ್ಲಿ ಹೇಳದಿರುವ, ಭಾರತೋಕ್ತ–ಭಾರತದಲ್ಲಿ ಹೇಳಿರುವ, ತದನುಕ್ತ–ಭಾರತದಲ್ಲಿಯೂ ಹೇಳದಿರುವ, ಸಂಪ್ರದಾಯಗತ–ಸಮೀಚೀನವಾದ ಪರಂಪರಾಪ್ರಾಪ್ತ - ಪರಂಪರೆಯಿಂದ ಬಂದ, ಸ್ವೇತರ-ಸ್ವಾಭಿನ್ನತಯಾ–ತನ್ನಿಂದ ಭಿನ್ನವೂ, ಅಭಿನ್ನವೂ ಇದ್ದಂತೆ, ಅಶೇಷ ಶಕ್ತಿ ವಿಶೇಷಾಭ್ಯಾಂ–ಸರ್ವಾಂತ್ಯ ಶಕ್ತಿ ಹಾಗೂ ವಿಶೇಷ ಶಕ್ತಿಗಳೆಂಬ ಎರಡರ ಪ್ರಭಾವದಿಂದ ಪೃಥಕ್ ವ್ಯವಹಾರ ವಿಷಯಭೂತ, ಬೇರೆ ಬೇರೆ ವ್ಯವಹಾರಕ್ಕೆ ವಿಷಯವಾಗುವ, ಸರ್ವಸಾಮರ್ಥ್ಯೋಪೇತ ಸರ್ವಸಾಮರ್ಥ್ಯದಿಂದ ಸಹಿತವಾದ, ನಿರವಧಿ ಕಾನಂತಾನವದ್ಯ–ಅವಧಿರಹಿತವೂ ಅನಂತವೂ, ನಿತ್ಯವೂ, ನಿರ್ದುಷ್ಟವೂ ಆದ, ಕಲ್ಯಾಣಗುಣಗಣ ಪರಿಪೂರ್ಣಾನಂತ ಗುಣೋಪಸಂಹರ್ತೄಣಾಂ–ಕಲ್ಯಾಣಗುಣಗಣದಿಂದ ಪೂರ್ಣವಾದ ಭಗವಂತನ ಅನಂತಗುಣಗಳನ್ನು ಉಪಸಂಹಾರ ಮಾಡುವವರಾದ.

**ತಾತ್ಪರ್ಯ :-** ಆಚಾರ್ಯರು ಚಿಂತಿಸುವ ಹರಿಯ ರೂಪಗಳಲ್ಲಿ ಒಂದೊಂದರಲ್ಲೂ ಅನಂತ ರೂಪಗಳಿವೆ. ಮತ್ತವುಗಳಲ್ಲಿ ಒಂದೊಂದರಲ್ಲಿಯೂ ಅನಂತ ರೂಪಗಳಿವೆ. ಆ ರೂಪ ಗುಣಕ್ರಿಯಾದಿಗಳು ವೇದದಲ್ಲಿ ಹೇಳಿದೆ. ಅಲ್ಲಿ ಹೇಳದೆ ಇರುವುದನ್ನು ಭಾರತದಲ್ಲಿ ಹೇಳಿದೆ. ಹಾಗೂ ಭಾರತದಲ್ಲಿಯೂ ಹೇಳದೆ ಇರುವ ಹರಿಯ ಗುಣಗಳಿಂದ ಕೂಡಿದ ರೂಪಗಳಾಗಿವೆ. ಆ ರೂಪಗಳು ಅಲ್ಪತ್ವ, ಅಪೂರ್ಣತೆಯೇ ಮೊದಲಾದ ಎಲ್ಲ ಬಗೆಯ ದೋಷಗಳಿಂದ ರಹಿತವಾಗಿದೆ. ಅನಂತರೂಪಗಳು ಅಭಿನ್ನವು ಹಾಗೂ ಆತನ ಸ್ವರೂಪವೇ ಆಗಿದೆ. ಅಂದರೆ ರಾಮನಿಂದ ಅಭಿನ್ನವಾದ ಕೃಷ್ಣನ ರೂಪ ರಾಮನಲ್ಲಿದೆ. ತನ್ನ ಇಚ್ಛೆಗೆ

ಅನುಸಾರಿಯಾಗಿ ಶ್ರೀಹರಿಯು ಒಂದು ರೂಪವನ್ನು ಜಗತ್ತಿಗೆ ತೋರಿಸುತ್ತಾನೆ. ಆದರೆ ಕೃಷ್ಣರೂಪನಲ್ಲಿದ್ದಾಗ ಜಾಂಬವಂತನಿಗೆ ತನ್ನರಿರುವ ಅಭಿನ್ನವಾದ ರಾಮರೂಪವನ್ನು ತೋರಿಸಿದ. ಪುರಾಣಪ್ರಸಿದ್ಧವಾದ ಹರಿಯ ಲೀಲೆಗಳು ಇದಕ್ಕೆ ದೃಷ್ಠಾಂತವಾಗಿದೆ. ರೂಪ-ಗುಣ-ಕ್ರಿಯಾದಿಗಳು ಪರಸ್ಪರ ಅಭಿನ್ನಗಳಾಗಿದ್ದರೂ, ವಿಶೇಷ ಬಲದಿಂದಾಗಿ ಭಿನ್ನ ವ್ಯವಹಾರಕ್ಕೆ ಒಳಪಡುತ್ತದೆ. '**ವೇದೋಕ್ತ ತದನುಕ್ತ ಭಾರತೋಕ್ತ**' ಎಂಬ ವಿಷಯವು ಪಂಡಿತಮಂಡಲಿಯ ವಿಮರ್ಶೆಗೆ ಒಳಪಟ್ಟು ಅದನ್ನು ಈ ರೀತಿ ವಿಚಾರ ಮಾಡಬಹುದು. ಹೇಗೆಂದರೆ ವೇದಗಳ ಪರಮ ಮುಖ್ಯಗುರಿ ಭಗವಂತನ ಗುಣಗಳ ಗಾನವೇ ಆಗಿದೆ. ಅದರಲ್ಲಿ ಹೇಳದೆ ಇರುವ ಹರಿಗುಣಗಳು ಇತರೆ ಗ್ರಂಥಗಳಲ್ಲಿ ಹೇಳಿದ್ದಾರೆ ಎನ್ನುವುದು ಎಷ್ಟು ಸಮಂಜಸವಾಗುವುದು.

ಆದರೆ ವೇದಾಭಿಮಾನಿ ಸಿರಿದೇವಿಯು "**ಸಕಲ ವಾಙ್ಮನಸ ದೇವತಾ**" (**ಶೃತಿ ತತಿಗಳಿಗಭಿಮಾನಿ ಶ್ರೀಲಕ್ಷ್ಮಿ**) ಆ ಮಹಾತಾಯಿಯೂ ಕೂಡ ಹರಿಯ ಅನಂತಗುಣಗಳನ್ನು ಪೂರ್ಣವಾಗಿ ತಿಳಿದಿಲ್ಲವೆಂಬುದು ವೇದ ವೈದಿಕ ಸಾಹಿತ್ಯಗಳಲ್ಲಿ ಪ್ರಮಾಣ ಪ್ರಮಿತವಾಗಿದೆ. "**ಸರ್ವದೇವಗಣಾಚಿಂತ್ಯ ಗುಣಪೂರ್ಣ ಸದಾ ರಮಾ**" ಅರ್ಥಾತ್ ಬ್ರಹ್ಮಾದಿಗಳಿಂದಲೂ ಅಚಿಂತ್ಯವಾದ ಮಹಾಜ್ಞಾನವುಳ್ಳ ಸಿರಿದೇವಿಯೂ, ಪರಮಾತ್ಮನ ಗುಣಗಳ ಗಣನೆ ಅಥವಾ ಚಿಂತನೆಯಲ್ಲಿ ತೊಡಗಿದರೆ, ಆಗ ಆಕೆಯೂ ಕೂಡ ಆತನಲ್ಲಿ ಹೊಸ ಹೊಸ ವಿಶೇಷಗಳನ್ನು ಕಾಣುತ್ತ ಆಶ್ಚರ್ಯ ಪಡುತ್ತಾಳೆ. ಅದನ್ನು "**ಪಶ್ಯಂತಿ ಸಂತತಂ ಸಾ ನವನವ ಸುವಿಶೇಷೋಪ ಲಂಬೇನ ತತ್ ತತು । ಕಾಲೇ ಕುತೂಹಲಾಬ್ಧೌ ಸುಮಹತಿ ಗಹನೇ ಗಾಹಮಾನವತಾನ್ನಃ ॥** ಸದಾ ಶ್ರೀಹರಿಯನ್ನು ನೋಡುವ ಲಕ್ಷ್ಮಿ ಇಂದಿನವರೆವಿಗೂ ಶ್ರೀಹರಿಯ ಗುಣಗಳ ಗಣವನ್ನು ತಿಳಿದಿಲ್ಲಾ. ಅದನ್ನೇ ದಾಸವರ್ಯರು ತಿಳಿಸುತ್ತಾ "**ಬಗೆ ಬಗೆಯ ನೂತನವ ಕಾಣುತ ಮಿಗೆ ಹರುಷದಿಂ ಪೊಗಳಿ ಹಿಗ್ಗುವ ತ್ರಿಗುಣಮಾನಿ ಮಹಾಲಕುಮಿ ಸಂತೈಸಲೆಮ್ಮನನುದಿನವು ॥**" ಎಂದಿದ್ದಾರೆ. ಈ ಎಲ್ಲ

ಪ್ರಮಾಣವನ್ನು ವಿಚಾರ ಮಾಡಿದರೆ ರಮಾದೇವಿಯು ಹರಿಯ ಅನಂತಗುಣಗಳಲ್ಲಿ ಯಾವುದೂ ಒಂದು ಗುಣದಲ್ಲಿರುವ ಅನಂತರೂಪ ಗುಣ-ಕ್ರಿಯಾದಿಗಳಲ್ಲಿನ ಲಕ್ಷಾಂಶ್ಷದಲ್ಲಿನ ಒಂದು ಅಂಶವನ್ನು ಪೂರ್ಣವಾಗಿ ತಿಳಿಯಲಾರಳು ಎಂದಮೇಲೆ ಹರಿಯು ಗುಣಗಳಿಂದ ಅನಂತನಾಗಿದ್ದಾನೆ. ಆ ಹರಿಯ ಗುಣವು ರಮಾ-ಬ್ರಹ್ಮಾದಿಗಳಿಂದ ಅಚಿಂತ್ಯವಾದದ್ದು. ಆದರೆ ಮಹಾಭಾರತ ಗ್ರಂಥಕರ್ತೃಗಳಾದರೂ ಸಾಕ್ಷಾತ್ ಶ್ರೀನಾರಾಯಣನ ಅವತಾರಿಭೂತರಾದ ಶ್ರೀವ್ಯಾಸರೇ ಆಗಿದ್ದಾರೆ. ಅವರು ಜ್ಞಾನವು ಲಕ್ಷ್ಮಿಗಿಂತಲೂ ಅನಂತ ಪಟ್ಟು ಹೆಚ್ಚಿನದಾಗಿದೆ. ಶ್ರೀವ್ಯಾಸರು ಸರ್ವಜ್ಞಶಿಖಾಮಣಿಗಳೂ ಸಹ ಅಂತಹವರು ತಮ್ಮ ಭಾರತದಲ್ಲಿ ಲಕ್ಷ್ಮೀಜ್ಞಾನಕ್ಕೆ ಗೋಚರವಾಗದ ಕೇವಲ ಈಶ್ವರ ಜ್ಞಾನಕ್ಕೆ ಗೋಚರವಾಗುವ ವಿಶೇಷಾರ್ಥಗಳಿಂದ ಕೂಡಿದ ಮಹಾಭಾರತವನ್ನು ರಚಿಸಿದರೆಂದು ಹೇಳಿದ್ದಾರೆ. ಇದು ಅಸಂಭಾವ್ಯವು ಅಲ್ಲ ಹಾಗೂ ಅಸಂಗತವೂ ಅಲ್ಲ. ಅದನ್ನೆ "**ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಂ**" ಎಂದಿದ್ದಾರೆ. ವೇದಕ್ಕಿಂತಲೂ ಹೆಚ್ಚಿನ ಅರ್ಥಗಳಿಂದ ವಿಷ್ಣುವನ್ನು ತಿಳಿಯಲು ಐದನೇ ವೇದವಾದ ಮಹಾಭಾರತವನ್ನು ರಚಿಸಿದರೆಂದೂ ಹೇಳಲಾಗಿದೆ. ಹೀಗಾಗಿ ಪ್ರಮೇಯವನ್ನು ನಿರೂಪಿಸುವ ಸಂದರ್ಭದಲ್ಲಿ ಮಹಾಭಾರತವು ಸರ್ವೋತ್ಕೃಷ್ಟವಾಗಿದೆ. ಮಹಾಭಾರತವು ದರ್ಶನ-ಸಮಾದಿ ಹಾಗೂ ಗುಹ್ಯ ಎಂಬುದಾಗಿ ಮೂರು ಭಾಷೆಗಳಿಂದ ಕೂಡಿದೆ. ಅಲ್ಲದೆ ಪ್ರತಿ ಶ್ಲೋಕವು ಹತ್ತತ್ತು ಅರ್ಥಗಳನ್ನು ಕೂಡಿದೆ. ಭಾರತದಲ್ಲಿ ಹೇಳದಿರುವ ವಿಷಯವೇ ಇಲ್ಲಾ. ಇಲ್ಲಿ ಇಲ್ಲದೇ ಇರುವುದು ಇನ್ನೇಲ್ಲಿಯೂ ಇಲ್ಲಾ. ಇವೆಲ್ಲವೂ ಭಾರತದಲ್ಲಿನ ಹಿರಿಮೆಯಾಗಿದೆ. ಆದ್ದರಿಂದಲೇ ಮಂತ್ರಾಲಯಪ್ರಭುಗಳು. **ವೇದೋಕ್ತ-ತದನುಕ್ತ-ಭಾರತೋಕ್ತ** ಎಂದು ಹೇಳಿದ್ದಾರೆ. ಪ್ರಸಕ್ತ "**ತದನುಕ್ತ**" ಅಂದರೆ ಭಾರತದಲ್ಲಿಯೂ ಹೇಳದ ಅಂದರೆ ಕಂಠತಃ ಸ್ಪಷ್ಟವಾಗಿ ಹೇಳದೆ "**ಚ**" ಹಾಗೂ "**ತು**" ಇವೇ ಮೊದಲಾದ ವರ್ಣಗಳಲ್ಲಿ ಸೂಚಿಸಿ ಅದನ್ನು ಸಂಪ್ರದಾಯಾನುಸಾರಿಯಾಗಿ ಅರ್ಥ ವಿಶೇಷಗಳನ್ನು ಗುರುಮುಖೇನ ಅಭ್ಯಾಸ ಮಾಡಿ ಚಿಂತಿಸುವರು ಎಂಬುದಾಗಿ ತಿಳಿಸಿದ್ದಾರೆ.

ಮುಂದೆ ರಾಯರು ''ಅಶೇಷ ಶಕ್ತಿ ವಿಶೇಷಾಭ್ಯಾಂ'' ಎನ್ನುತ್ತಾ ಬಹ್ವರ್ಥಗರ್ಭಿತವಾದ ಪ್ರಮೇಯವನ್ನು ತಿಳಿಸಿದ್ದಾರೆ. ಭೇದವಿಲ್ಲದ ಕಡೆಯಲ್ಲಿ ಕಾಣಬಹುದಾದ ಭೇದಕಾರ್ಯವನ್ನು ನಿರ್ವಹಿಸುವುದಕ್ಕೆ ಶೃತಿಗಳು ಪರಮಾತ್ಮನ ಅಚಿಂತ್ಯಾದ್ಭುತ ಶಕ್ತಿಯನ್ನು ಕಾರಣನವನ್ನಾಗಿ ಹೇಳುತ್ತದೆ. ಕಾರಣವಿಲ್ಲದೆ ಕಾರ್ಯವಿಲ್ಲವೆಂದು ಪ್ರಸಿದ್ಧಿ. ಆದ್ದರಿಂದ ಶೃತಿಸ್ಮೃತಿಗಳು ಶ್ರೀಹರಿಶಕ್ತಿ ವಿಶೇಷವೇ ಭೇದನಿರ್ವಾಹಕವೆಂದು ಹೇಳಿದೆ. ಹಾಗೆಯೇ ವಿಶೇಷಕ್ಕೂ-ವಿಶಿಷ್ಟಕ್ಕೂ ಅಭೇದವು. ಯಾವುದು ಯುಕ್ತಿಗೆ ವಿರುದ್ಧವೆಂದು ತೋರುವುದೂ, ಆ ಎಲ್ಲವೂ ಶ್ರೀಹರಿಯಲ್ಲಿ ಆತನ ಅಚಿಂತ್ಯಾದ್ಭುತ ಶಕ್ತಿಯಿಂದ ಕೂಡುತ್ತದೆ. ಇದನ್ನೇ ರಾಯರು **''ಅಶೇಷ ಶಕ್ತಿವಿಶೇಷಾಭ್ಯಾಂ''** ಎಂದಿದ್ದಾರೆ. ಎಲ್ಲಾ ಗುಣಗಳ ಜ್ಞಾನವಿದ್ದರೂ ಎಷ್ಟು ಗುಣಗಳು ಧ್ಯಾನಕಾಲಕ್ಕೆ ಏಕದಾ ಸ್ವಭುಜಗಳಂತೆ ಕಾಣುವವೋ ಆ ಗುಣಗಳನ್ನು ಏಕಾಗ್ರತೆಯಂತೆ ಧ್ಯಾನ ಮಾಡುವುದೇ ಗುಣೋಪಸಂಹಾರವು. ಬ್ರಹ್ಮದೇವರಿಗೆ ಹರಿಯ ಸರ್ವಗುಣಗಳು ಯಥಾ ಯೋಗ್ಯವಾಗಿ ಹೀಗೆ ಗೋಚರವಾಗುತ್ತದೆ. ಗುಣೋಪಸಂಹಾರಕ್ಕೆ ಚತುರ್ಮುಖರೇ ಅಧಿಕಾರಿಯು. ಇತರೆ ಅಂದರೆ ಬ್ರಹ್ಮನಕ್ಕಿಂತ ಕೆಳಗಿನ ರುದ್ರಾದಿ ದೇವತೆಗಳು ಬಹುಗುಣದಿಂದಲೂ ಮಾನವರು ಕೇಲವೇ ಗುಣಗಳಿಂದ ಶ್ರೀಹರಿಯನ್ನು ಉಪಾಸನೆ ಮಾಡುವರು. ಸಾಮಾನ್ಯವಾಗಿ ಮಾನವರಲ್ಲಿ ಉತ್ತಮಾಧಿಕಾರಿಗಳು ಸತ್-ಚಿತ್-ಆನಂದ-ಆತ್ಮ ಎಂಬ ಶ್ರೀಹರಿಯ ನಾಲ್ಕು ಗುಣಗಳನ್ನು ಉಪಾಸನೆ ಮಾಡುತ್ತಾರೆ. ಬ್ರಹ್ಮದೇವರು ಮಾತ್ರ ಸರ್ವಗುಣೋಪಸಂಹಾರರೂಪ ಶ್ರೀಹರಿಯ ಉಪಾಸನೆ ಮಾಡುವವರು. ಬ್ರಹ್ಮಪದಾರ್ಹರಾದ ಶ್ರೀವಾಯುದೇವರು ಹೀಗೆಯೇ ಗುಣೋಪಸಂಹಾರರೂಪ ಶ್ರೀಹರಿಯನ್ನು ಧ್ಯಾನಿಸತಕ್ಕವರು ಆಗಿದ್ದಾರೆ.

**೧೦. ತಥಾ ವೇದೋಕ್ತ ಸರ್ವಕ್ರಿಯೋಪಸಂಹರ್ತೄಣಾಂ ಏವಂ ಅನಂತರೂಪಾವಯವಗುಣಕ್ರಿಯಾಜಾತ್ಯವಸ್ಥಾವಿಶಿಷ್ಟ ಭಗವದು-ಪಾಸಕಾನಾಂ....**

**ಪ್ರತಿಪದಾರ್ಥ :-** ತಥಾ-ಹಾಗೆ ಗುಣಗಳ ಚಿಂತನೆ ಮಾಡುವುದೇ ಅಲ್ಲದೆ, ವೇದೋಕ್ತ-ವೇದದಲ್ಲಿ ಹೇಳಿದ, ಸರ್ವಕ್ರಿಯೋಪ ಸಂಹರ್ತ್ರ್ಯಾಣಾಂ-ಶ್ರೀಹರಿಯು ಮಾಡುವ ಸೃಷ್ಟ್ಯಾದಿ ಸಮಸ್ತ ಕ್ರಿಯಾದಿಗಳನ್ನು ಚಿಂತಿಸಿ ಧ್ಯಾನ ಮಾಡುವವರಾದ. ಏವಂ-ಇದೇ ರೀತಿ, ಅನಂತ ರೂಪಾವಯುವ ಗುಣ-ಕ್ರಿಯಾಜಾತ್ಯವಸ್ಥಾ ವಿಶಿಷ್ಟ ಭಗವದುಪಾಸಕಾನಾಂ-ಹರಿಯ ಅನಂತ ರೂಪಗಳನ್ನು, ಕರಚರಣಾದಿ ಅವಯವ ವಿಶೇಷಗಳನ್ನು ಜ್ಞಾನಾನಂದಾದಿ, ಮಂಗಳಕರ ಗುಣಗಳನ್ನು ಹಾಗೂ ಕ್ರಿಯಾಗಳನ್ನು ಈ ಎಲ್ಲಾ ಸಜಾತೀಯ-ವಿಜಾತೀಯ ಎಂಬ ಅವಸ್ಥಾವಿಶೇಷಗಳೊಂದಿಗೆ ಉಪಸಂಹಾರ ಮಾಡಿ ಧ್ಯಾನ ಮಾಡುವವರಾದ.

**ತಾತ್ಪರ್ಯ :-** ಹಿಂದೆ ವಾಯುದೇವರ ಗುಣೋಪಸಂಹಾರರೂಪ ಧ್ಯಾನವನ್ನು ತಿಳಿಸಿದ ಮಂತ್ರಾಲಯ ಮಹಾಪ್ರಭುಗಳು ಈಗ ವಾಯುದೇವರು ಮಾಡುವ ಕ್ರಿಯೋಪಸಂಹಾರರೂಪ ಧ್ಯಾನವನ್ನು ತಿಳಿಸುತ್ತಾರೆ. ಹೀಗೆ ಕ್ರಿಯೋಪಸಂಹಾರರೂಪ ಧ್ಯಾನವನ್ನು ತಿಳಿಸುತ್ತಾರೆ. ಹೀಗೆ ಕ್ರಿಯೋಪ-ಸಂಹಾರರೂಪ ಧ್ಯಾನ ಹಾಗೂ ಗುಣೋಪಸಂಹಾರರೂಪ ಧ್ಯಾನವೆಂದು ಎರಡು ಬಗೆಯಾಗಿ ಧ್ಯಾನವನ್ನು ಪ್ರತ್ಯೇಕಿಸಿ ತಿಳಿಸುವುದರಲ್ಲಿ ಒಂದು ವಿಶೇಷವಿದೆ. ಅದೇನೆಂದರೆ ವಾಯುಬ್ರಹ್ಮರಂತೆ ವಾಣಿ-ಭಾರತಿಯರು ಕೂಡ ಶ್ರೀಹರಿಯನ್ನು ಸರ್ವಗುಣೋಪಸಂಹಾರ ರೂಪದಿಂದಲೇ ಧ್ಯಾನ ಮಾಡುತ್ತಾರೆ. ಆದರೂ ಅವರಿಗೆ ಮುಕ್ತಿಯಲ್ಲಿ ಅವರ ಪತಿಗಳಾದ ಬ್ರಹ್ಮವಾಯುಗಳಿಗಿಂತ ಕಡಿಮೆ ಆನಂದ ಆಗುತ್ತದೆ. ಸಮಾನ ಉಪಾಸನೆಯ ಫಲವಾಗಿ ಸಮಾನ ಆನಂದ ಇಲ್ಲ. ಇದಕ್ಕೆ ಕಾರಣವೇನೆಂದರೆ ಬ್ರಹ್ಮ ಹಾಗೂ ವಾಣೀದೇವಿಯರ ಉಪಾಸನೆಯಲ್ಲಿರತಕ್ಕ ವ್ಯತ್ಯಾಸ. ಹರಿಯಲ್ಲಿ ನಿತ್ಯವ್ಯಕ್ತವಾಗುವ ಕ್ರಿಯಾಗಳು ಕ್ರಿಯಾಸಾಮಾನ್ಯಗಳು. ಈ ಬಗೆ ಕ್ರಿಯೋಪಸಂಹಾರರೂಪ ಧ್ಯಾನದಲ್ಲಿ ಬ್ರಹ್ಮ-ವಾಣಿಯರಿಗೆ ವ್ಯತ್ಯಾಸವಿದೆ. ಅದನ್ನು ವ್ಯಾಸಗದ್ಯದಲ್ಲಿ ತಿಳಿಸುತ್ತಾ ಅನಂತವೇದೋಕ್ತ ತದನುಕ್ತ ಭಾರತೋಕ್ತ ಪ್ರಕಾರೇಣ **''ಬ್ರಹ್ಮೋಪಾಸಿತಾನಂತ ಗುಣಾನಂತರೂಪಾಯ''** ಇದು ಬ್ರಹ್ಮದೇವರ ಉಪಾಸನೆಯಾದರೆ, ಭಾರತೀ ಹಾಗು ಸರಸ್ವತಿದೇವಿಯರು **''ಕ್ರಿಯಾ ಸಮಾನ್ಯೇನ ಸರಸ್ವತ್ಯುಪಾಸಿತ ಅನಂತ ಗುಣಾನಂತ ರೂಪಾಯಾ''**

ಎಂಬಲ್ಲಿ ಇವರೀರ್ವರ ಉಪಾಸನೆಯ ಸಮಾಸವು ಭಾವಗಳು ಸ್ಪಷ್ಟವಾಗಿ ತೋರುತ್ತದೆ.

ವೇದೋಕ್ತ ತದನುಕ್ತ-ಭಾರತೋಕ್ತ-ಸಂಪ್ರದಾಯೋಕ್ತ ಸಮಸ್ತಗುಣಗಳನ್ನು ಸರಸ್ವತಿ ದೇವಿಯರು ಉಪಸಂಹಾರ ಮಾಡಿದರೂ. ಬ್ರಹ್ಮದೇವರು ಮಾಡುವ ಕ್ರಿಯಾವಿಶೇಷಗಳನ್ನು ನಿತ್ಯೋಪಾಸನೆ ಮಾಡಲು ಶಕ್ತಳಲ್ಲ. ಕ್ರಿಯಾ ವಿಶೇಷಗಳೆಂದರೆ ವಿಜಾತಿಯ ಕ್ರಿಯೆಗಳೆಂದು ತಿಳಿಯಬೇಕು. ಇಂತಹ ವಿಜಾತೀಯ ಕ್ರಿಯಾ ವಿಶೇಷಗಳನ್ನು ಬ್ರಹ್ಮದೇವರು ನಿತ್ಯೋಪಾಸನೆ ಮಾಡುವವರಾಗಿದ್ದಾರೆ. ಚಲನರೂಪಕ್ರಿಯೆಯು ನಿತ್ಯ ವಿಕ್ರಾಂತಿಯೆನಿಸಿ ಕ್ರಿಯಾ ಸಾಮಾನ್ಯವೆನಿಸಿದೆ. ಈ ಬಗೆಯ ಕ್ರಿಯಾ ಸಾಮಾನ್ಯ ಸರ್ವಗುಣೋಪಸಂಹಾರರೂಪ ಧ್ಯಾನ ಮಾಡುತ್ತಾಳೆ. ಇಲ್ಲಿ ಶ್ರೀ ತ್ರಿವಿಕ್ರಮರೂಪಿಯಾದ ಶ್ರೀಹರಿಯು ಭೂಮಿಯನ್ನು ಅಳೆಯುವ ಸಂದರ್ಭದಲ್ಲಿ ನಡೆದ ಪಾದಾಕ್ರಮಣವು ಕ್ರಿಯಾವಿಶೇಷವು. ಇಂತಹ ಕ್ರಿಯಾ ವಿಶೇಷಗಳ ನಿತ್ಯ ಸರ್ವಗುಣೋಪ ಸಂಹಾರರೂಪ ಧ್ಯಾನವನ್ನು ಕೇವಲ ವಾಯುಬ್ರಹ್ಮರು ಮಾತ್ರ ಮಾಡುವ ಅಧಿಕಾರಿಗಳಾಗಿದ್ದಾರೆ.

ಶ್ರೀಹರಿಯ ಕ್ರಿಯಾವಿಶೇಷಗಳ ಉಪಾಸನೆಯ ಫಲ ಮಹತ್ತರವಾದದ್ದು. ಪಾದಾಕ್ರಮಣ, ಮೃತಭಕ್ಷಣ, ವೇಣುಗಾನ, ನವನೀತ ಭಕ್ಷಣ ಇವೇ ಮೊದಲಾದ ಕ್ರಿಯಾವಿಶೇಷಗಳು ಅಲ್ಪವೆಂದು ಕಂಡರು. ಆ ಎಲ್ಲಾ ಕ್ರಿಯೆಗಳು ಮಹಾಮಹಿಮೆಯಿಂದ ಕೂಡಿದವುಗಳು ಆಗಿವೆ. ಶ್ರೀ ಮದಾನಂದ ತೀರ್ಥರ ಆನಂದತೀರ್ಥರ ಗಮನಾಸನ ಸಂಕಥಾದಿ ಲೀಲೆಗಳನ್ನು ಚಿಂತಿಸುವ ಸಾಧಕ ಶ್ರೇಷ್ಠನಿಗೆ ಮಹಾಫಲಪ್ರದವಾಗಿವೆ. ಅಂದಮೇಲೆ ಹರಿಯ ಅಲ್ಪವೆಂದು ತೋರುವ ಕ್ರಿಯಾ ವಿಶೇಷಗಳೂ, ಧ್ಯಾನದಿಂದ ಮಹಾಫಲಪ್ರದವೆಂದು ವಿಶೇಷವಾಗಿ ಹೇಳಬೇಕಾಗಿಲ್ಲ. ಸರ್ವಗುಣೋಪಾಸನಾ ಸಾಮ್ಯದಿಂದ ಸ್ಥಾನ ಒಂದೇ ಆದರೂ ಕ್ರಿಯೋಪಸಂಹಾರ ರೂಪ ವೈಲಕ್ಷಣ್ಯವಿರುವ ಕಾರಣ ಮೋಕ್ಷದಲ್ಲಿನ ಆನಂದದಲ್ಲಿ ತಾರತಮ್ಯ ಬ್ರಹ್ಮ-ವಾಣಿಯರಿಗೆ ಉಂಟಾಗುತ್ತದೆ.

೧೧. ಪರಮದಯಾಳೂನಾಂ ಕ್ಷಮಾಸಮುದ್ರಾಣಾಂ ಭಕ್ತವತ್ಸಲಾನಾಂ ಭಕ್ತಾಪರಾಧಸಹಿಷ್ಣೂನಾಂ ಸ್ವಭಕ್ತಾನ್ ದುರ್ಮಾರ್ಗಾದುದ್ಧೃತ್ಯ ಸನ್ಮಾರ್ಗಸ್ಥಾಪಕಾನಾಂ ಸ್ವಭಕ್ತಂ ಮಾಮುದ್ದಿಶ್ಯ ಭಗವತಃ ಪುರಃ ಪರಮದಯಾಲೋ ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾ-ಪರಾಧಸಹಿಷ್ಣೋ ತ್ವದಧೀನಂ ದೀನಂ ದೂನಂ ಅನಾಥಂ ಶರಣಾಗತಮೇನಮುದ್ಧರೇತಿ ವಿಜ್ಞಾಪನಕರ್ತೄಣಾಂ....

**ಪ್ರತಿಪದಾರ್ಥ :-** ಪರಮದಯಾಳೂನಾಂ–ಅತಿಯಾದ ದಯಾವಂತರಾದ, ಕ್ಷಮಾಸಮುದ್ರಾಣಾಂ–ಕ್ಷಮೆ ಎನ್ನುವ ಗುಣದಿಂದ ಪೂರ್ಣರಾದ, ಭಕ್ತವತ್ಸಲಾನಾಂ–ಭಕ್ತರಲ್ಲಿ ವಾತ್ಸಲ್ಯದಿಂದ ಕೂಡಿರುವವರಾದ, ಭಕ್ತಾಪರಾಧ ಸಹಿಷ್ಣೂನಾಂ–ತಮ್ಮ ಭಕ್ತರು ಮಾಡುವ ಅಪರಾಧಗಳನ್ನು ಸಹಿಸಿ ಕ್ಷಮಿಸುವವರಾದ, ಸ್ವಭಕ್ತಾನ್–ತಮ್ಮ ಭಕ್ತರನ್ನು ದುರ್ಮಾರ್ಗಾತ್–ಕೆಟ್ಟಮಾರ್ಗದಿಂದ ಉದ್ಧೃತ್ಯ–ಉದ್ಧರಿಸಿ, ಸನ್ಮಾರ್ಗಸ್ಥಾಪಕಾನಾಂ–ಸಮೀಚೀನವಾದ ಒಳ್ಳೆಯ ದಾರಿಯಲ್ಲಿಟ್ಟು ಸಲಹುವವರಾದ, ಸ್ವಭಕ್ತಂ ಮಾಂ ಉದ್ದಿಶ್ಯ–ತಮ್ಮ ಭಕ್ತರಾದ ನಮ್ಮನ್ನು ತೋರಿಸುತ್ತಾ, ಭಗವತಃ ಪುರಃ–ಶ್ರೀಹರಿಯ ಎದುರಿನಲ್ಲಿ ಪರಮ ದಯಾಳೋ–ಹೇ ಶ್ರೇಷ್ಠದಯಾಲುವೇ, ಕ್ಷಮಾಸಮುದ್ರ–ಕ್ಷಮೆಯಲ್ಲಿ ಎಣೆಯೇ ಇರದ ಸಮುದ್ರದಂತಿರುವವನೆ, ಭಕ್ತವತ್ಸಲ–ಭಕ್ತರಲ್ಲಿ ಅತ್ಯಂತ ಪ್ರೀತಿಯುಳ್ಳವನೆ, ಭಕ್ತಾಪರಾದ ಸಹಿಷ್ಣೋ–ಭಕ್ತರು ಮಾಡುವ ಅಪರಾದಗಳನ್ನು ಸಹಿಸಿ ಕ್ಷಮಿಸುವವನೇ, ತ್ವದಧೀನಂ–ನಿನ್ನ ದಾಸನಾದ, ದೀನಂ–ಕರುಣೆಗೆ ಆಸ್ಪದನಾದ, ದೂನಂ–ದುಃಖದಿಂದ ತಪ್ತನಾದ, ಅನಾಥ–ರಕ್ಷಕರಿಲ್ಲದವನಾದ, ಶರಣಾಗತಂ–ನಿನ್ನಲ್ಲಿ ಶರಣು ಬಂದಿರುವ, ಏನಂ–ಈ ಜೀವನನ್ನು, ಉದ್ಧರ–ಉದ್ಧರಿಸು, ಇತಿ–ಹೀಗೆ, ವಿಜ್ಞಾಪನ ಕರ್ತೄಣಾಂ–ವಿಶಿಷ್ಟವಾದ ಪ್ರಾರ್ಥನೆ ಮಾಡುವವರಾದ.

**ತಾತ್ಪರ್ಯ :-** ಪರಮ ದಯಾಲುತ್ವ, ಕ್ಷಮ ಸಮುದ್ರ, ಭಕ್ತವಾತ್ಸಲ್ಯ, ಭಕ್ತರು ಮಾಡುವ ಅಪರಾದಗಳನ್ನು ಸಹಿಸುವಿಕೆ, ಇವು ಶ್ರೀಹರಿಯಲ್ಲಿರುವ ಗುಣಗಳು. ಈ ಗುಣಗಳು ಶ್ರೀಹರಿಯ ಮುಖ್ಯ ಪ್ರತಿಬಿಂಬಸ್ಥಾನಿಯರಾದ ಶ್ರೀವಾಯುದೇವರಲ್ಲಿಯೂ ಇದೆ. ವಿಶೇಷವೇನೆಂದರೆ ಈ ಒಂದೊಂದು

ಗುಣಗಳು ಶ್ರೀಹರಿಯ ಅನಂತಾನಂತವಾಗಿದೆ. ಅಂದರೆ ಶ್ರೀವಾಯುದೇವರಲ್ಲಿ ರುದ್ರಾದಿ ಇತರ ದೇವತೆಗಳಿಗಿಂತಲೂ ಅನಂತವಾಗಿದೆ. ಎಂದಷ್ಟೇ ತಿಳಿಯಬೇಕು.

ಶ್ರೀಹರಿಯ ಪರಮ ಕರುಣಾಳುತ್ವವನ್ನು ನಾವು ಹರಿಯು ಮಾಡುವ ಸೃಷ್ಟಿಯೇ ಮೊದಲಾದ ಕಷ್ಟಕಾರ್ಯಗಳಿಂದ ತಿಳಿಯಬಹುದು. ಹೇಗೆಂದರೆ ಪೂರ್ಣಕಾಮನಾದ, ಅಪೇಕ್ಷರಹಿತನಾದ, ಪ್ರಯೋಜನರಾಹಿತ್ಯನಾದರೂ ಶ್ರೀಹರಿಯು ಸೃಷ್ಟ್ಯಾದಿಗಳನ್ನು ಮಾಡುತ್ತಾನೆ. ಇದಕ್ಕೆ ಏನು ಕಾರಣವೆಂದರೆ ಶ್ರೀಹರಿಯ ಕರುಣಾಳುತ್ವವೇ ಆಗಿದೆ. ಅರ್ಥಾತ್ ಶ್ರೀಹರಿಯು ಕರುಣೆಯಿಂದ ಸೃಷ್ಟ್ಯಾದಿ ಸಮಸ್ತ ಕಾರ್ಯಗಳನ್ನು ನಮ್ಮೆಲ್ಲರ ಒಳಿತಿಗಾಗಿ ಮಾಡುತ್ತಾನೆ. ಇದಲ್ಲದೆ ಶ್ರೀಹರಿಯ ಕರುಣಾಳುತ್ವ ಭಕ್ತರ ಅಪರಾದಗಳನ್ನು ಕ್ಷಮಿಸುವರಲ್ಲಿ ಶ್ರೀಹರಿಗೆ ಸಮನಾದವರು ಯಾರೂ ಇಲ್ಲಾ. ಅದನ್ನು ದಾಸವರ್ಯರು ತಿಳಿಸುತ್ತಾ **''ಪಾಪಕರ್ಮಗಳ ಸಹಿಸುವೊಡೆ ಲಕುಮಿಪತಿಗೆ ಸಮರಾದ ದಿವಿಜರನು ನಾ ಕಾಣೆ''** ಎಂದಿದ್ದಾರೆ.

ಶ್ರೀಹರಿಯು ಮಾಡುವ ಸಕಲ ವ್ಯಾಪಾರದಲ್ಲಿ ಮುಖ್ಯ ವಾಯುದೇವರು ಪ್ರಧಾನಾಂಗರಾಗಿದ್ದಾರೆ. **''ಪ್ರಧಾನಾಂಗ ಹಿ ಮಾರುತಿ''** ಆದ ಕಾರಣ ಶ್ರೀಹರಿಯಲ್ಲಿನ ಈ ಗುಣಗಳು ಶ್ರೀವಾಯುದೇವರಲ್ಲಿಯೂ ಯಥಾ-ಯೋಗ್ಯವಾಗಿ ಹಾಗೂ ರುದ್ರಾದಿ ಇತರ ಜೀವರಾಶಿಗಿಂತಲೂ ಅಧಿಕವಾಗಿದೆ. ವಾಯುದೇವರನ್ನು ನಂಬಿದವರಿಗೆ ಸಂಸಾರದ ಭಯವನ್ನು ಬಾರದ ಹಾಗೆ ನೋಡಿಕೊಳ್ಳುತ್ತಾರೆ. ಸಾಧಕನಿಗೆ ಬರುವ ಕಲ್ಯಾದಿ ದೈತ್ಯರ ಬಾಧೆಯನ್ನು ನಿವಾರಿಸಿ ಅಧಿವ್ಯಾದಿಯನ್ನು ಪರಿಹಾರ ಮಾಡುವ ಕರುಣಾಳು ಕೆಳಗಿದ್ದಾರೆ. ಸಕಲ ಸಜ್ಜನವೃಂದಕ್ಕೆ ಜ್ಞಾನೋಪದೇಶ ಮಾಡುವ ಜಗದ್ಗುರುಗಳಾಗಿದ್ದಾರೆ. ಸಮುದ್ರಮಥನ ಮಾಡುವ ಸಮಯದಲ್ಲಿ ಮೊದಲಿಗೆ ಬಂದ ಹಾಲಹಲ ವೃಕ್ಷವನ್ನು ಪಾನಮಾಡಿ ದೇವದಾನವ ಸಮೂಹವನ್ನು ವಿಷದ ಬಾಧೆಯಿಂದ ಸಲುಹಿದ ಕರುಣಾಳುಗಳು ಶ್ರೀವಾಯುದೇವರೇ ಆಗಿದ್ದಾರೆ.

ವಾಯುದೇವರ ಸ್ಮರಣೆ ಮಾಡುವವರಿಗೆ ಬುದ್ಧಿ-ಬಲ-ಯಶ-ಧೈರ್ಯ ಇವೇ ಮೊದಲಾದವು ಸಿದ್ಧಿಸುತ್ತವೆ ಎಂದಮೇಲೆ, ಶ್ರೀವಾಯುದೇವರ ಕಾರುಣ್ಯ ಹೆಚ್ಚೆಂದು ಹೇಳಬೇಕಾದ್ದದ್ದು ಏನಿದೆ ?

ಶ್ರೀವಾಯುದೇವರು ತಮ್ಮನ್ನು ನಂಬಿದ,ತಮ್ಮ ಭಕ್ತರು ಏನಾದರೂ ಲೋಪದೋಷಾದಿಗಳಿಂದ ಹರಿಯ ಮಾರ್ಗದಿಂದ ವಿಮುಖರಾಗಿದ್ದರೆ ಅಂತಹ ಸಜ್ಜನರನ್ನು ಶ್ರೀವಾಯುದೇವರು ತಮ್ಮ ಸಚ್ಛಾಸ್ತ್ರಾದಿಗಳ ಉಪದೇಶ ಉಪನ್ಯಾಸಾದಿಗಳಿಂದ ದುರ್ಮಾಗದಿಂದ ಎತ್ತಿ ಸನ್ಮಾರ್ಗದಲ್ಲಿಟ್ಟು ನಡೆಸುವವರು ವಾಯುದೇವರೇ ಆಗಿದ್ದಾರೆ. ತಮ್ಮ ಭಕ್ತರಿಗಾಗಿ ಹರಿಯ ಮುಂದೆ ನಿಂತು ಪರಮದಯಾಳುವೇ ಕ್ಷಮಾ ಸಮುದ್ರನೇ ಭಕ್ತವತ್ಸಲನೇ ಭಕ್ತರು ಮಾಡುವ ಅಪರಾಧಗಳನ್ನು ಕ್ಷಮಿಸುವ ಹರಿಯೇ! ನಿನ್ನ ಅಧೀನನಾಗಿ ದಾಸನಾಗಿರುವ ಒಡೆಯ, ನಿನ್ನಲ್ಲದೆ ಇನ್ನೊಬ್ಬ ಒಡೆಯರು ಇಲ್ಲವೆಂದು ನಿನ್ನಲ್ಲೇ ಶರಣು ಬಂದಿರುವ ಇತನನ್ನು ಕ್ಷಮಿಸಿ ಉದ್ಧರಿಸು'' ಹೀಗೆಂದು ವಿಜ್ಞಾಪನೆ ಮಾಡುವವರು ಸಕಲ ಜೀವನಿಕರದ ಸಾಧಕೇಶರಾದ ಶ್ರೀವಾಯುದೇವರು ಮಾತ್ರ. ಹೀಗೆ ಜೀವರನ್ನು ಉದ್ಧಾರ ಮಾಡೆಂದು ಶ್ರೀಹರಿಯ ಮುಂದೆ ಪ್ರಾರ್ಥನೆ ಮಾಡುವ ಕರುಣಾಳುಗಳು ಶ್ರೀವಾಯುದೇವರು ಆಗಿದ್ದಾರೆ.

**೧೨. ಸರ್ವಜ್ಞಶಿರೋಮಣೀನಾಂ ಅಶೇಷಗುರ್ವಂತರ್ಯಾಮಿಣಾಂ ಸದಾಭಗವತ್ಪರಾಣಾಂ ಭಗವತೋಽನ್ಯತ್ರ ಸರ್ವವಸ್ತುಷು ಮನಃಸಂಗರಹಿತಾನಾಂ....**

**ಪ್ರತಿಪದಾರ್ಥ :-** ಸರ್ವಜ್ಞಶಿರೋಮಣೀನಾಂ–ಸರ್ವಜ್ಞ ಶಿರೋಮಣಿ-ಗಳಾದ, ಅಶೇಷಗುರ್ವಂತರ್ಯಾಮಿಣಾಂ–ಸಕಲ ಗುರುಗಳ ಅಂತರ್ಯಾಮಿಗಳು, ಸದಾ ಭಗವತ್ಪರಾಣಾಂ–ಎಲ್ಲಾ ಕಾಲದಲ್ಲಿಯೂ ಹರಿಯ ಧ್ಯಾನವುಳ್ಳವರಾದ, ಭಗವತೋನ್ಯತ್ರ–ಹರಿಯನ್ನು ಹೊರತುಪಡಿಸಿ, ಇತರ ಸರ್ವವಸ್ತುಷು–ಬೇರೆ ಸಕಲ ವಸ್ತುಗಳಲ್ಲಿ ಮನಃಸಂಗರಹಿತಾನಾಂ–ಮನವಿಲ್ಲದವರಾದ,

**ತಾತ್ಪರ್ಯ** :- ಪರಮ ಮುಖ್ಯಾರ್ಥದಲ್ಲಿ ಶ್ರೀಹರಿಯು ಒಬ್ಬನೇ ಸರ್ವಜ್ಞನಾಗಿದ್ದಾನೆ. ಸಿರಿದೇವಿಯು ಕೂಡ ಆತನ ಅನಂತರದಲ್ಲಿ ಸರ್ವಜ್ಞರಾಗಿದ್ದಾರೆ. ಆಕೆಯ ಸರ್ವಜ್ಞತ್ವವೂ ಕೂಡ ಈಶ್ವರಾಧೀನವಾಗಿದೆ. ಆಕೆಯು ಹರಿಯನ್ನು ಬಿಟ್ಟು ಉಳಿದ ಸರ್ವವನ್ನು ಅಶೇಷ ವಿಶೇಷಗಳೊಂದಿಗೆ ತಿಳಿಯುವ ಸರ್ವಜ್ಞಳು, ಸರ್ವಜಗತ್ತನ್ನು ಅಂಗೈನಲ್ಲಿನ ಪದಾರ್ಥದಂತೆ ತಿಳಿಯುತ್ತಾಳೆ. ಇಲ್ಲಿ ಹರಿಯು ಸರ್ವಜ್ಞತ್ವವು ಸ್ವತಂತ್ರ. ಅದರ ರಮೆಯ ಜ್ಞಾನವು ಸ್ವತಂತ್ರವಾದುದಲ್ಲ. ಕಿಂತು ಹರಿಯ ಅಧೀನವಾಗಿದೆ. ಹರಿಯ ಜ್ಞಾನವು ಸ್ವ-ಪರ ಸಮಸ್ತ ವಸ್ತುಗಳ ಜ್ಞಾನವಾಗಿದ್ದು. ಲಕ್ಷ್ಮೀಜ್ಞಾನವು ಈಶಾದನ್ಯತ್ರ ಸರ್ವವಿಷಯಜ್ಞಾನವಾಗಿ ಹರಿಯ ಜ್ಞಾನಕ್ಕಿಂತ ನ್ಯೂನವಾಗಿದೆ. ಹರಿ-ರಮೆಯನ್ನು ಬಿಟ್ಟರೆ ಉಳಿದವರು ಋಜು ಜೀವರು. ಇವರು ಈಶ-ಲಕ್ಷ್ಮಿಯನ್ನು ಬಿಟ್ಟು ಉಳಿದ ವಿಷಯವನ್ನು ಆಲೋಚನೆ ಮಾತ್ರದಿಂದಲೇ ತಿಳಿಯುತ್ತಾರೆ. ಇವರ ಮನೋವೃತ್ತಿರೂಪ ಜ್ಞಾನವು ಯಥಾರ್ಥವಾಗಿದೆ. ಯಾವ ಜ್ಞಾನಾಧಿಕಾರಿಯು ಸ್ವಯೋಗ್ಯತೆಗೆ ಪೂರ್ಣವಾದ ಜ್ಞಾನವನ್ನು ಸಂಪಾದಿಸುವರೂ ಅವರನ್ನು ಒಂದು ವಿವಕ್ಷೆಯಿಂದ ಸರ್ವಜ್ಞರೆನ್ನಬಹುದು. ಹರಿ-ಸಿರಿಯನ್ನು ಬಿಟ್ಟು ಬ್ರಹ್ಮಾದಿ ಅನಂತ ಮುಕ್ತಿಯೋಗ್ಯ ಜೀವರಲ್ಲಿ ತಾರತಮ್ಯಾನುಸಾರವಾಗಿ ಸೋತ್ತಮರು ಸ್ವಾವವರರಿಗಿಂತ ಹೆಚ್ಚು ಸರ್ವಜ್ಞರು. ಉದಾಹರಣೆ ತಾತ್ವಿಕಯೋಗಿಗಳ ಸರ್ವಜ್ಞತ್ವವು ಅತಾತ್ವಿಕರಾದ ಯೋಗಿಗಳಿಗೆ ಕಲ್ಪನಾತೀತವಾಗಿದೆ. ಅಂದಮೇಲೆ ಶ್ರೀವಾಯುದೇವರ ಸರ್ವಜ್ಞತೆಯನ್ನು ಅನ್ಯಜೀವರು ತಿಳಿಯುವುದಾದರೂ ಹೇಗೆ ಸಾಧ್ಯ? ಜೀವರಾಶಿ ಅಪೇಕ್ಷೆಯಿಂದ ಶ್ರೀವಾಯುದೇವರು ಹಾಗೂ ಅವರ ಅವತಾರಿಭೂತರಾದ ಶ್ರೀಮದಾನಂದತೀರ್ಥರನ್ನು ಸರ್ವಜ್ಞರೆಂದು ತಿಳಿಸಲು ಶ್ರೀಗುರುರಾಜರು "**ಸರ್ವಜ್ಞ ಶಿರೋಮಣೀನಾಂ**" ಎಂದಿದ್ದಾರೆ.

ಶ್ರೀವಾಯುದೇವರು ಅಶೇಷಗುರುಗಳ ಅಂತರ್ಯಾಮಿಯಾಗಿದ್ದಾರೆ. ಹೇಗೆಂದರೆ ಯಾರಿಗೂ ಯಾವುದೇ ಒಬ್ಬನೇ ಗುರುವಿನಿಂದ ಪೂರ್ಣಪ್ರಮಾಣದ ಜ್ಞಾನದೊರೆಯುವುದಿಲ್ಲಾ. ಆದರೆ ಬ್ರಹ್ಮದೇವರಿಗೆ ಮಾತ್ರ ಹಾಗಲ್ಲ. ಅವರಿಗೆ

ಜ್ಞಾನೋಪದೇಶಕನಾದ ಗುರುವು ಶ್ರೀಹರಿಯೊಬ್ಬನೇ ಆಗಿದ್ದಾನೆ. ಬ್ರಹ್ಮಪದವಿಗೆ ಯೋಗ್ಯನಾದ ಜೀವನಿಗೆ ಶ್ರೀಹರಿಯೇ ಉಪದೇಶ ಮಾಡುತ್ತಾನೆ. ಅಂತೆಯೇ ಮೋಕ್ಷವನ್ನು ಕರುಣಿಸುತ್ತಾನೆ. ಮುಕ್ತಿಯೋಗ್ಯರು ಮುಕ್ತಿಗಾಗಿ ಬಹುಗುರುಗಳಿಂದ ಜ್ಞಾನಲಾಭವನ್ನು ಹೊಂದಿದ್ದರೂ, ಅಂತ್ಯದಲ್ಲಿ ಬ್ರಹ್ಮದೇವನಿಂದ ಉಪದೇಶವನ್ನು ಪಡೆಯದೆ ಮೋಕ್ಷವಿಲ್ಲ. ಹೀಗಾಗಿ ಹರಿಯು ಬ್ರಹ್ಮನಿಗೆ ಏಕಮಾತ್ರ ಗುರುವಾಗಿದ್ದಾರೆ. ನಂತರದಲ್ಲಿ ಶ್ರೀಬ್ರಹ್ಮದೇವರು ಸಕಲ ಜೀವರಿಗೂ ಗುರುಸ್ಥಾನಿಯನಾಗುತ್ತಾನೆ. ಹೇಗೆಂದರೆ ಬ್ರಹ್ಮದೇವರು ಚಿತ್ತಾಭಿಮಾನಿ. ಉಪದೇಶ ಮಾಡುವ ಸರ್ವಗುರುಗಳ ಚಿತ್ತದಲ್ಲಿ ತಾನೇ ಇದ್ದು ಉಪದೇಶ ಮಾಡುವ ಕಾರಣ ಅಶೇಷ ಗುರುಗಳ ಅಂತರ್ಯಾಮಿ ಎನಿಸಿದ್ದಾರೆ. ಅವರೇ ಶ್ರೀ ಆನಂದತೀರ್ಥರಾದ ಕಾರಣ ಮಂತ್ರಾಲಯಾಧೀಶರು ಶ್ರೀಮದಾನಂದ ತೀರ್ಥರನ್ನು "**ಅಶೇಷಗುರ್ವಂತರ್ಯಾಮಿಣಾಂ**" ಎಂದು ಸಂಬೋಧಿಸಿದ್ದಾರೆ.

ಶ್ರೀವಾಯುದೇವರು ಸದಾ ಶ್ರೀಹರಿಸ್ಮರಣೆಯನ್ನು ಮಾಡುವ ಮಹಾನುಭಾವರು. ಅವರ ಸಕಲಕರ್ಮಗಳು ಹರಿಪ್ರೀತಿಗಾಗಿ ಇರುತ್ತದೆ. ಅದನ್ನು ಶ್ರೀನಾರಾಯಣ ಪಂಡಿತಾಚಾರ್ಯರು ತಿಳಿಸುತ್ತ "**ಸಮುಪತ್ಯ ಕೃತ್ಯಾನಿ ಕೃತೀ ಕೃತಾನಿ ವ್ಯಾಸಾಯ ಭೂಮ್ನೇಸುಕೃತಾನಿ ತಾವತ್ । ಕರಿಷ್ಯಮಾಣಾನಿ ಚ ತಸ್ಯ ಪೂಜಾಂ ಸಂಕಲ್ಪಯಾಮಾಸ ಸ ಶುದ್ಧ ಬುದ್ಧಿಃ ॥**" ಎಂದಿದ್ದಾರೆ. ಎಲ್ಲೆಡೆಯಲ್ಲಿಯೂ ತದಾಕಾರ ತದಭಿನ್ನ ತದವಾಚ್ಯ ಶ್ರೀಹರಿಯನ್ನು ಕಂಡು ಧ್ಯಾನಿಸುವ ಮಹಾಚೇತನ ಶ್ರೀವಾಯುದೇವರು ಅದನ್ನೇ ರಾಯರು "ಸದಾ ಭಗವತ್ಪರಾಣಾಂ" ಎಂದಿದ್ದಾರೆ. ಶ್ರೀಹರಿಗಿಂತ ಭಿನ್ನವಾದ ಇತರ ವ್ಯಕ್ತಿ ಅಥವ ವಸ್ತುಗಳಲ್ಲಿ ರಾಗ ದ್ವೇಷಾದಿಗಳನ್ನು ಮಾಡದವರು ಶ್ರೀವಾಯುದೇವರು. ಎಲ್ಲ ಭಗವದಧೀನವೆಂದು ಅರಿತು ಪ್ರಿಯಾಪ್ರಿಯಗಳ ಭಾವನೆಗೆ ಅವಕಾಶ ಕೊಡದವರು ಶ್ರೀವಾಯುದೇವರು. ಕರ್ಮದ ಸ್ವತಂತ್ರ ಕರ್ತೃತ್ವ ಹಾಗೂ ಫಲದಾಶೆಯನ್ನು ಬಿಟ್ಟು ಹರಿಯ ಮೆಚ್ಚುಗೆಗಾಗಿ ಸಕಲ ಕರ್ಮಗಳನ್ನು ಮಾಡುವವರು ಶ್ರೀವಾಯುದೇವರು. ಹರಿಯ ಹೊರತಾದ ಇತರ ವಸ್ತುಗಳಲ್ಲಿ

ಎಂದು ಮನವನ್ನಿಡದ ಮಹಾನುಭಾವರು ಎಂಬುದನ್ನು ಶ್ರೀರಾಯರು "ಭಗವತೋಽನ್ಯತ್ರ ಮನ ಸಂಗ ರಹಿತಾಂ" ಎಂದಿದ್ದಾರೆ.

೧೩. **ಸರ್ವತ್ರ ಸರ್ವದಾ ಸರ್ವಾಕಾರ ಸರ್ವಾಧಾರ ಸರ್ವಾಶ್ರಯ ಸರ್ವೋತ್ಪಾದಕ ಸರ್ವಪಾಲಕ ಸರ್ವಸಂಹಾರಕ ಸರ್ವನಿಯಾಮಕ ಸರ್ವಪ್ರೇರಕ ಸರ್ವಪ್ರವರ್ತಕ ಸರ್ವನಿವರ್ತಕ ಯಥಾಯೋಗ್ಯಂ ಸರ್ವಜ್ಞಾನಾಜ್ಞಾನಬಂಧಮೋಕ್ಷಪ್ರದ ಸರ್ವಸತ್ತಾಪ್ರದ ಸರ್ವಶಬ್ದವಾಚ್ಯಸರ್ವಶಬ್ದಪ್ರವೃತ್ತಿನಿಮಿತ್ತ ಸರ್ವಗುಣಾತಿ-ಪರಿಪೂರ್ಣತಮ ಸರ್ವದೋಷಾತಿದೂರ ಸರ್ವಾಚಿಂತ್ಯ ಸರ್ವೋತ್ತಮ ಸರ್ವೇಶ್ವರ ಸರ್ವಾತ್ಯಂತವಿಲಕ್ಷಣ ಸ್ವಗತ-ಭೇದವಿವರ್ಜಿತತ್ವಾದಿನಾ ಭಗವದ್ಧರ್ಮಾಣಾಂ.....**

**ಪ್ರತಿಪದಾರ್ಥ :-** ಸರ್ವತ್ರ–ಎಲ್ಲೆಡೆಯಲ್ಲಿಯೂ, ಸರ್ವದಾ–ಎಲ್ಲಾ ಕಾಲದಲ್ಲಿಯೂ, ಸರ್ವಾಕಾರ–ಎಲ್ಲಾ ವಸ್ತುಗಳಂತೆ ಅನಂತ ರೂಪಗಳುಳ್ಳವನೂ, ಸರ್ವಾಧಾರ–ಸರ್ವ ವಸ್ತುಗಳ ಇರುವಿಕೆಗೆ ಕಾರಣನೂ ಆದ, ಸರ್ವಾಶ್ರಯ–ಸಕಲ ವಿಶ್ವದ ರಕ್ಷಣೆಯೇ ಮೊದಲಾದ ಆಶ್ರಯನೂ, ಸರ್ವೋತ್ಪಾದಕ–ಸರ್ವ ಸೃಷ್ಟಿಕರ್ತನೂ, ಸರ್ವಪಾಲಕ– ಸರ್ವವನ್ನು ಪಾಲಿಸುವವನೂ, ಸರ್ವಸಂಹಾರಕ–ಸರ್ವ ಸಂಹಾರಕನೂ ಆದ, ಸರ್ವನಿಯಾಮಕ–ಸರ್ವವವನ್ನು ನಿಯಮನ ಮಾಡುವವನು, ಸರ್ವಪ್ರೇರಕ– ಸರ್ವಜೀವರ ವೃತ್ತಿಪ್ರೇರಕನು, ಸರ್ವಪ್ರವರ್ತಕ–ಸರ್ವಜೀವರ ಕ್ರಿಯೆಗಳನ್ನು ಮಾಡಿಸುವವನು, ಸರ್ವನಿವರ್ತಕ–ಸರ್ವರ ವೃತ್ತಿಗಳನ್ನು ಬಿಡಿಸುವವನು, ಯಥಾಯೋಗ್ಯಂ–ಸರ್ವವಸ್ತುಗಳ ಸ್ವಭಾವಕ್ಕೆ ಅನುಗುಣವಾಗಿ, ಸರ್ವಜ್ಞಾನಾಜ್ಞಾನ ಬಂಧಮೋಕ್ಷಪ್ರದ–ಎಲ್ಲ ಬಗೆಯ ಜೀವರಿಗೆ ಜ್ಞಾನ–ಅಜ್ಞಾನ–ಬಂಧ–ಮೋಕ್ಷಾದಿಗಳನ್ನು ಹೊಂದಿಸುವವನು, ಸರ್ವಸತ್ತಪ್ರದ–ಎಲ್ಲ ವಸ್ತುಗಳಿಗೆ ಶಕ್ತಿ ಕೊಡುವವನು, ಸರ್ವಶಬ್ದವಾಚ್ಯ–ಎಲ್ಲಾ ಶಬ್ದಗಳಿಂದಲೂ ಮುಖ್ಯ ವಾಚ್ಯನಾದವವನು, ಸರ್ವಶಬ್ದಪ್ರವೃತ್ತಿನಿಮಿತ್ತ–ಶಬ್ದಗಳ ಪ್ರವೃತ್ತಿಗೆ ಮತ್ತು ನಿವೃತ್ತಿಗೆ ಕಾರಣನಾದವನು, ಸರ್ವಗುಣಾತಿ ಪರಿಪೂರ್ಣತಮ–ಸರ್ವಸದ್ಗುಣಗಳಿಂದ

ಪರಿಪೂರ್ಣನಾದವನು. ಸರ್ವದೋಷಾತಿದೂರ–ಸಕಲ ದೋಷದಿಂದ ರಹಿತನು, ಸರ್ವಾಚಿಂತ್ಯ ರಮಾ ಬ್ರಹ್ಮಾದಿಗಳಿಂದಲೂ ಅಚಿಂತ್ಯನಾದವನು, ಸರ್ವೋತ್ತಮ–ಎಲ್ಲರಿಗಿಂತಲೂ ಎಲ್ಲಾ ಬಗೆಯಿಂದ ಶ್ರೇಷ್ಠನಾದವನು, ಸರ್ವೇಶ್ವರ–ಸರ್ವರಿಗೂ ಸ್ವಾಮಿಯಾದವನು. ಸರ್ವಾತ್ಯಂತ ವಿಲಕ್ಷಣ–ಎಲ್ಲಾ ವಸ್ತುಗಳಿಗಿಂತಲೂ ವಿಭಿನ್ನವಾದ ಲಕ್ಷಣಗಳಿಂದ ಕೂಡಿದ ಸ್ವರೂಪವುಳ್ಳವನು, ಸ್ವಗತಭೇದ ವಿವರ್ಜಿತತ್ವಾದಿನಾ–ತನ್ನ ಅನಂತ ರೂಪಗಳಲ್ಲಿ ಪರಸ್ಪರವಾಗಿಯೂ ಹಾಗೂ ಒಂದೊಂದು ರೂಪದಲ್ಲಿನ ಗುಣ–ಕ್ರಿಯಾದಿಗಳಿಂದ ಸಹ ಅತ್ಯಂತಾಭಿನ್ನನೂ ಎನ್ನುವ ಇವೇ ಮುಂತಾದ ಪೂರ್ಣಭಾವನೆಗಳಿಂದ, ಭಗವದ್ದಷ್ಟೄಣಾಂ–ಹರಿಯ ಸ್ವರೂಪವನ್ನು ನೋಡುವವರಾದ.

**ತಾತ್ಪರ್ಯ :-** ವಾಯುದೇವರ ಅವತಾರಿ ಭೂತರಾದ ಶ್ರೀಮದಾನಂದ–ತೀರ್ಥರು ಶ್ರೀಹರಿಯನ್ನು ನೋಡುವ ಬಗೆಯನ್ನು ವರ್ಣಿಸುತ್ತಾ ಸರ್ವತ್ರ ಸರ್ವದಾ ಎಂಬುದಾಗಿ ತಿಳಿಸುತ್ತಾ ಸರ್ವತ್ರದಲ್ಲಿರುವ ಹರಿಯನ್ನು ಆಚಾರ್ಯರು ಕಾಣುತ್ತಾರೆ.

ಎಲ್ಲಾ ಕಾಲದಲ್ಲಿರುವ ಸರ್ವವಸ್ತುವಿನ ಆಕಾರದಂತಿರುವ ಎಲ್ಲಾ ವಸ್ತುಗಳ ಇರುವಿಕೆಗೆ ಕಾರಣನಾದ, ಸಕಲಜಗತ್ತಿಗೆ ಆಶ್ರಯೀಭೂತನಾದ, ಸರ್ವವನ್ನು ಸೃಷ್ಟಿಸಿದವನಾದ, ಸರ್ವರನ್ನು ಪಾಲಿಸುವನಾದ, ಸರ್ವವನ್ನು ಸರ್ವರನ್ನು ಸಂಹರಿಸುವ, ಎಲ್ಲರನ್ನು ತನ್ನ ವಶದಲ್ಲಿಟ್ಟಿರುವ, ಎಲ್ಲರ ಪ್ರವೃತ್ತಿ ಪ್ರೇರಕನಾದ, ಎಲ್ಲರಲ್ಲಿದ್ದು ಕ್ರಿಯಾಶೀಲನಾದ, ಎಲ್ಲರ ಪ್ರವೃತ್ತಿಗಳನ್ನು ಬಿಡಿಸುವವನಾದ, ಸ್ವಭಾವಕ್ಕೆ ಅನುಗುಣವಾಗಿ ಸರ್ವರಿಗೂ ಜ್ಞಾನ-ಬಂಧನ-ಮೋಚನೆ ಕೊಡುವವನಾದ, ಎಲ್ಲ ವಸ್ತುಗಳಿಗೆ ಶಕ್ತಿಪ್ರದನಾದ, ಎಲ್ಲಾ ಶಬ್ದಗಳಿಂದಲೂ ವಾಚ್ಯನಾದ, ಶಬ್ದಗಳ ಪ್ರವೃತ್ತಿಗೆ ಕಾರಣನಾದ, ಸಕಲ ಗುಣಗಣ–ಪರಿಪೂರ್ಣತಮನಾದ ಸಕಲ ದೋಷಗಳಿಂದಲೂ ದೂರನಾದ ರಮಾಬ್ರಹ್ಮಾದಿ–ಗಳಿಂದಲೂ ಅಚಿಂತ್ಯನಾದ, ಸರ್ವಶ್ರೇಷ್ಠನಾದ ಸರ್ವರಿಗೂ ಒಡೆಯನಾದ, ಸಕಲವಸ್ತುಗಳಿಗಿಂತ ವಿಭಿನ್ನಸ್ವರೂಪ ಉಳ್ಳವನಾದ, ತನ್ನ ಅನಂತವಾದ

ರೂಪ-ಗುಣಾದಿಗಳಲ್ಲಿ ಯಾವುದೇ ಭೇದವಿಲ್ಲದವನಾದ, ಇವೇ ಮೊದಲಾದ ಗುಣಗಳಿಂದ ಭರಿತನಾದ ಶ್ರೀಹರಿಯ ಸ್ವರೂಪವನ್ನು ನೋಡುತ್ತಿರುವವರಾದ, ಅರ್ಥಾತ್‌ನಿತ್ಯಾಪರೋಕ್ಷಿಗಳಾದವರು ಶ್ರೀಮದಾನಂದತೀರ್ಥರು. ಸರ್ವತ್ರವೆಂದರೆ ಸರ್ವದೇಶದಲ್ಲಿ ವ್ಯಾಪ್ತನಾಗಿದ್ದಾರೆ. ಅವನು ಇಲ್ಲದ ಸ್ಥಳವಾಗಲಿ ದೇಶ ಕಾಲಗಳಾಗಲಿ ಇಲ್ಲ. ಶ್ರೀಹರಿಯು ದೇಶ ಕಾಲಗಳಿಂದ ಪೂರ್ಣನಾಗಬೇಕಾದರೆ ವ್ಯಾಪ್ತನಾಗಿರಲೇ ಬೇಕು. ಕಾಲವೆಂದರೆ ಅವನೇ ಆಗಿದ್ದಾನೆ– **''ಕಾಲಶ್ಚ ನಾರಾಯಣಃ''** ಎನ್ನುತ್ತದೆ ಶೃತಿಯು. **''ಪುರುಷ ಏವೇದಂ ಸರ್ವಂ''** ಎನ್ನುತ್ತದೆ ಶೃತಿಯು. **ಎಲ್ಲ ಠಾವಿನಲ್ಲಿ ಲಕುಮಿನಲ್ಲನಿದ್ದಾನೆ.** ಮತ್ತೊಂದು ಶೃತಿ **''ಊರ್ಧ್ವಶ್ಚನಾರಾಯಣ, ಅದಶ್ಚನಾರಾಯಣ, ಅಂತರ್ಬಹಿಶ್ಚ ನಾರಾಯಣ''** ಎನ್ನುತ್ತಾ ಶ್ರೀಹರಿಯು ಸರ್ವತ್ರ ಇರುವುದನ್ನು ಸಾಭೀತುಮಾಡಿದರೆ ದಾಸವರ್ಯ **''ಎಲ್ಲಿ ನೋಡಿದರಲ್ಲಿ ತಾನಿಲ್ಲದಿಲ್ಲವೆಂದು ಬಲ್ಲ ಜಾಣರೇ ಎಲ್ಲಿ ನೋಡಿದಿರಿ''** ಎಂದು ಹೇಳುತ್ತಾ ಹರಿಯು ಸರ್ವತ್ರದಲ್ಲಿದ್ದಾನೆಂದು ಹರಿದಾಸರು ಡಂಗೂರ ಸಾರಿದ್ದಾರೆ. ಹೀಗೆ ಎಲ್ಲೆಡೆಯಲ್ಲಿರುವ ಶ್ರೀಹರಿಯನ್ನು ನೋಡುವ ಮಹಾಚೇತನ ಶ್ರೀಮದಾನಂದ-ತೀರ್ಥ ಭಗವತ್ಪಾದಾಚಾರ್ಯರು ಇದೆಲ್ಲವನ್ನು ಶ್ರೀಗುರುರಾಜರು ಸಂಗ್ರಹಿಸಿ ಸರ್ವತ್ರ ಎಂದಿದ್ದಾರೆ.

ಸರ್ವದಲ್ಲಿರುವ ಹರಿಯು ಯಾವುದೋ ಒಂದು ಕಾಲದಲ್ಲಿ ಮಾತ್ರ ಇದ್ದವನಲ್ಲ. ಅವನು ಹೇಗೆ ದೇಶದಿಂದ ವ್ಯಾಪ್ತನಾಗಿದ್ದನೋ ಹಾಗೆಯೇ ಕಾಲದಿಂದಲೂ ವ್ಯಾಪ್ತನೇ ಆಗಿದ್ದಾನೆ. ಅಂದರೆ ಅವನು ಎಲ್ಲಾ ಕಾಲದಲ್ಲಿಯೂ ಇದ್ದಾನೆ, ಹಿಂದೆ ಈಗ ಹಾಗೂ ಮುಂದೆಂಬುವ ಭೂತ-ಭವಿಷ್ಯ-ವರ್ತಮಾನ-ವೆಂಬ ಮೂರು ಕಾಲದಲ್ಲಿಯೂ ಇದ್ದಾನೆ. ಶ್ರೀಹರಿಯು ತ್ರೈಕಾಲಿಕ ಸತ್ಯಸ್ವರೂಪನೇ ಆಗಿದ್ದಾನೆ. ಅವನ್ನೇ ಶೃತಿಸ್ಮೃತಿಗಳು ಪ್ರಮಾಣೀಕರಿಸಿ ಅದು ಹರಿಯ ಮಹಿಮೆಯೆಂಬುದಾಗಿ ಹೊಗಳುತ್ತಿವೆ. **''ಯದ್ಭೂತಂ ಯಚ್ಚ ಭವ್ಯಂ''** ಎಂದು ವಿರಾಟ ಪುರುಷನ ಕಾಲವ್ಯಾಪ್ತಿಯನ್ನು ಸೂಕ್ತರಾಜ ಪುರುಷಸೂಕ್ತದಲ್ಲಿ

ಹರಿಯು ಸರ್ವದಾ ಇದ್ದಾನೆಂದು ವಿವರಿಸುತ್ತದೆ. ಚತುಶ್ಲೋಕಿ ಭಾಗವತವು ಕೂಡ ಶ್ರೀಹರಿಯ ದೇಶ ಹಾಗು ಕಾಲಗಳ ವ್ಯಾಪ್ತಿಯನ್ನು ಇದನ್ನೇ ತಿಳಿಸಿದೆ. ಇವೆಲ್ಲವನ್ನು ಸಂಗ್ರಹಿಸಿ ರಾಯರು ''**ಸರ್ವದಾ**'' ಎಂಬುವ ಶಬ್ದವನ್ನೇ ಇಟ್ಟು ಅಂತಹ ಗುಣಪೂರ್ಣನಾದ ಹರಿಯನ್ನು ನೋಡುವವರು ಶ್ರೀಮದಾಚಾರ್ಯರು ಎಂದಿದ್ದಾರೆ.

ಸಕಲ ಚೇತನಾಚೇತನಾತ್ಮಕ ಇಡೀ ಜಗತ್ತೆಲ್ಲವೂ ಶ್ರೀಹರಿಯ ಪ್ರತಿಬಿಂಬವೇ ಆಗಿದೆ. ಆದಕಾರಣ ಶ್ರೀಹರಿಯು ಸರ್ವವಸ್ತುಗಳಲ್ಲಿ ತದಾಕಾರತಭಿನ್ನ ಹಾಗೂ ತತ್‌ಸದೃಶನಾಗಿ ಬಿಂಬನಾಗಿ ಇರುತ್ತಾನೆ. ಆ ವಸ್ತುವಿನ ರೂಪವುಳ್ಳವನೇ ಆಗಿದ್ದರೂ ಆತನ ರೂಪಗಳೆಲ್ಲಾ ಸರ್ವಸೌಂದರ್ಯ ಲಕ್ಷಣದಿಂದ ಕೂಡಿಯೇ ಇದೆ. ಶ್ರೀಹರಿಗೆ ಕುರೂಪದ ಆಕಾರಗಳಾವುವೂ ಇಲ್ಲ. ಜೀವ ಧರಿಸುವ ದೇಹದಲ್ಲಿ ಊನ ಹಾಗೂ ದೋಷಾದಿಗಳು ಶ್ರೀಹರಿಗೆ ಅಧೀನವಾಗಿದೆ. ಆದಕಾರಣ ಶ್ರೀಹರಿಯಲ್ಲಿ ಆ ದೋಷಾದಿಗಳು ಇಲ್ಲ. ಜಡಾದಿಗಳಲ್ಲಿ ಶ್ರೀಹರಿಯ ಅಧೀನತ್ವ ಆಕಾರ-ಗುಣಗಳ ಅತ್ಯಲ್ಪವಾದ ಸದೃಶತ್ವವನ್ನು ತಿಳಿಯಬೇಕು. ಈ ವಿಷಯವನ್ನು ಮಂತ್ರಾಲಯ ಪ್ರಭುಗಳು **ಸರ್ವಕಾರ** ಎಂದಿದ್ದಾರೆ.

ಆದಿಯಲ್ಲಿ ಶ್ರೀಹರಿಯು ತನ್ನಿಂದ ಸೃಜ್ಯವಾದ ಈ ಜಗದ ಇರುವಿಕೆಗಾಗಿ ಹಾಗೂ ಜಗದಲ್ಲಿನ ಜೀವಗಳ ಪ್ರವೃತ್ತಿಗಾಗಿ ಭಗವಂತನು ಒಂದು ರೂಪದಿಂದ ತಾನೇ ಜಗದ ಒಳಗೆ ಪ್ರವಿಷ್ಟನಾದ. ''**ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್**'' ಎನ್ನುತ್ತದೆ ಶೃತಿ. ಹೀಗಾಗಿ ಶ್ರೀಹರಿಯ ಜಗತ್ತಿಗೂ ಹಾಗೂ ಜಗದಲ್ಲಿನ ಎಲ್ಲ ಜೀವರಿಗೂ ತಾನೇ ಸ್ವಯಂ ಆಧಾರನಾಗಿದ್ದಾನೆ. ಅರ್ಥಾತ್ ಸರ್ವಕ್ಕೂ ಸತ್ತಾಪ್ರದನಾಗಿದ್ದಾನೆ. ಅದನ್ನೇ ಶ್ರೀಗುರುರಾಜರು **ಸರ್ವಾದಾರ** ಎಂದಿದ್ದಾರೆ.

ಭಗವಂತನು ಇಡೀ ಜಗತ್ತಿಗೆ ರಕ್ಷಕನಾಗಿ ಆಶ್ರಯನಾಗಿದ್ದಾನೆ. ಇಡೀ ವಿಶ್ವವನ್ನೇ ತನ್ನ ಉದರದಲ್ಲಿಟ್ಟು ದಾಮೋದರನೆನಿಸಿ ತಾನು ಜಗತ್ತಿಗೆ ಆಶ್ರಯದಾತ ಎನಿಸಿದ್ದಾನೆ. ಅದನ್ನು ದಾಸವರ್ಯರು ತಿಳಿಸುತ್ತಾ **ಎಲ್ಲರೊಳು ತಾನಿಪ್ಪ** ಹಾಗೂ

**ತನ್ನೊಳಗೆ ಎಲ್ಲರನು ಧರಿಸಿಕೊಂಡಿಹ** ಎಂದು ಹರಿಯ ಸರ್ವಾಶ್ರಯತ್ವ ಗುಣವನ್ನು ಹರಿಕಥಾಮೃತಸಾರದಲ್ಲಿ ಗಾನ ಮಾಡಿರುತ್ತಾರೆ.

ಸರ್ವಜಗದ ಸೃಷ್ಟಿಕರ್ತನು ಶ್ರೀಹರಿಯೇ ಆಗಿದ್ದಾನೆ. ಶ್ರೀಹರಿಯು ಉತ್ಪಾದಕ-ಪಾಲಕ-ಸಂಹಾರಕ-ನಿಯಾಮಕ-ಪ್ರೇರಕ-ಪ್ರವರ್ತಕ-ನಿವರ್ತಕನು ಆಗಿದ್ದಾನೆ. ಅಂದರೆ ಹರಿಯೇ ಜೀವಜಡಾತ್ಮಕವಾದ ಜಗತ್ತಿಗೆ ಸೃಷ್ಟಿಯನ್ನು ಮಾಡುತ್ತಾನೆ. ಸ್ಥಿತಿಸಂಹಾರ ನಿಯಮನ ಜ್ಞಾನ ಅಜ್ಞಾನ ಬಂಧ ಮೋಕ್ಷವೇ ಎಂಬ ಎಂಟು ಕಾರ್ಯಗಳನ್ನು ಸ್ವತಂತ್ರವಾಗಿ ತಾನೇ ಮಾಡುತ್ತಾನೆ. ಮತ್ತಾರೋ ಈ ಕಾರ್ಯದಲ್ಲಿ ಸ್ವತಂತ್ರರು ಇಲ್ಲ.

ಇಂತಹ ಹರಿಯ ಅಷ್ಟಕರ್ತೃತ್ವದಲ್ಲಿ ಸ್ವಾಭಾವಿಕವಾಗಿ ಜ್ಞಾನ ಇಚ್ಛಾಕ್ರಿಯಾ ಇಲ್ಲದ ಜಡ ಜಗತ್ತಿಗೆ ಜ್ಞಾನ ಮೋಕ್ಷಗಳು ಕೊಡುವುದಿಲ್ಲ. ಆದರೆ ಚೇತನ ಜಗತ್ತಿಗೆ ಈ ಎಲ್ಲವೂ ಉಂಟು. ಈ ವ್ಯತ್ಯಾಸವನ್ನು ತಿಳಿಸುವ ಸಲುವಾಗಿ ಮಂತ್ರಾಲಯ ಪ್ರಭುಗಳು "**ಯಥಾ ಯೋಗ್ಯಂ**" ಎಂದು ಸೂಚಿಸಿದ್ದಾರೆ. ಅಷ್ಟಕರ್ತೃವಾದ ಶ್ರೀಹರಿಯೇ ಗ್ರಹ-ತಾರಕಾದಿಗಳ ಸಂಚಲ-ವಲನಾದಿಗಳನ್ನು ಕೊಡುವನು. ಆತನ ಆಜ್ಞೆಯಿಂದಾಗಿ ಸೂರ್ಯನ ಉದಯಾಸ್ತಮಾನಗಳು ಸಕಾಲದಲ್ಲಿ ಆಗುತ್ತದೆ ಎಂಬುದನ್ನು ಶೃತಿಗಳು ತಿಳಿಸಿ ಅವನ **ಪ್ರವರ್ತಕತ್ವ ನಿರ್ವತಕತ್ವ** ಹಾಗೂ ಆತನ ನಿಯಾಮಕತ್ವವನ್ನೇ ತಿಳಿಸುತ್ತದೆ.

ಇನ್ನೂ ಶ್ರೀಹರಿಯು ಸರ್ವಚೈತನ್ಯರಿಗೂ ಯಥಾಯೋಗ್ಯವಾಗಿ ಜ್ಞಾನ-ಅಜ್ಞಾನ-ಬಂಧ-ಮೋಕ್ಷಾದಿಗಳನ್ನು ಕೊಡುತ್ತಾನೆ. ಹೀಗೆ ಕೊಡುವಾಗ ಅವರ ಅನಾದಿಕರ್ಮ ಪುರುಷ ಪ್ರಯತ್ನ ಹಾಗೂ ಯೋಗ್ಯತೆಯನ್ನು ಅರಿತು ಅವರನ್ನು ಪ್ರೇರಿಸಿ ತನ್ಮೂಲಕ ಅವರಿಗೆ ಜ್ಞಾನಾದಿಗಳನ್ನು ಕೊಟ್ಟು ಕಾಯುತ್ತಾನೆ. ಮುಕ್ತಿಯೋಗ್ಯರಿಗೆ ನಿತ್ಯದಲ್ಲಿ ಆನಂದ ಕೊಡುವ ಮೋಕ್ಷವನ್ನು ನಿತ್ಯಸಂಸಾರಿಗರಿಗೆ ಸುಖ ಹಾಗೂ ದುಃಖದಿಂದ ಮಿಶ್ರಿತವಾದ ಗತಿಯನ್ನು ಹಾಗೂ ತಮೋಯೋಗ್ಯರಿಗೆ ನಿತ್ಯದಲ್ಲಿ ದುಃಖವನ್ನೇ ಕೊಡುವ ಅಂಧಃತಮಸ್ಸನ್ನು

ಶ್ರೀಹರಿಯು ತ್ರಿವಿಧ ಜೀವರಿಗೂ ಯಥಾಯೋಗ್ಯವಾಗಿ ಕೊಡುತ್ತಾನೆಂದು ತಿಳಿದು ಆತನನ್ನು ಭಜಿಸಬೇಕು. ಹಾಗೆ ತಿಳಿದು ಭಜಿಸುವವರು ಶ್ರೀಮದಾನಂದತೀರ್ಥರು

ಉತ್ಪತ್ತಿ ಹಾಗೂ ವಿನಾಶ ಇರುವ ಅಂತ್ಯವಾದ ವಸ್ತುಗಳಿಗೆ ಮಾತ್ರ ಸೃಷ್ಟಿಕರ್ತನನ್ನು ಸತ್ತಾಪ್ರದ ಎನ್ನಬಹುದು. ಆದರೆ ಸೃಷ್ಟಿಸಿದ ಪದಾರ್ಥಗಳನ್ನು ಅವುಗಳ ವಿನಾಶ ಪರ್ಯಂತರವಾಗಿ ರಕ್ಷಣೆ ಕೊಡುವನು ಸ್ಥಿತಿಕರ್ತ ಎನ್ನಬಹುದು. ಆದರೆ ಜೀವ ಅನಾದಿ ಅದಕ್ಕೆ ಉತ್ಪತ್ತಿ ನಾಶಾದಿಗಳು ಇಲ್ಲ. ಅವನು ನಿತ್ಯನಾಗಿದ್ದಾನೆ. ಅಂದಮೇಲೆ ಶ್ರೀಹರಿ ಸತ್ತಾಪ್ರದ ಎನ್ನುವುದಾದರೂ ಹೇಗೆ? ಎಂಬ ಶಂಕೆಗೆ ವೇದಗಳು '**ನಿತ್ಯೋನಿತ್ಯಾನಾಂ**' ಎಂದು ತಿಳಿಸಿ ನಿತ್ಯವುಳ್ಳ ಅನಾದಿಯಾದ ಜೀವರಾಶಿಗಳಿಗೆ ಆ ನಿತ್ಯತ್ವವನ್ನು ಕರುಣಿಸಿ ಹಾಗೂ ನಿತ್ಯವನ್ನು ತನ್ನ ಅಧೀನ ಮಾಡಿಕೊಂಡಿದ್ದಾನೆ. ಆದ ಕಾರಣ ಶ್ರೀಹರಿಯ ನಿತ್ಯವಸ್ತುಗಳಿಗೆ ನಿತ್ಯತ್ವಕೊಟ್ಟು ಅವಳ ಸತ್ತಾಪ್ರದ ಎನಿಸಿದ್ದಾನೆ. ಇದನ್ನೇ ಇನ್ನೊಂದು ವಾಕ್ಯವು ತಿಳಿಸುತ್ತಾ ''**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವ ಜೀವ ಏವ ಚ ಯದನುಗ್ರಹತಃ ಸಂತಿ ನಸಂತಿ ಯದುಪೇಕ್ಷಯಾ**'' ಅಂದರೆ ದ್ರವ್ಯ-ಕರ್ಮ-ಕಾಲ-ಪ್ರಕೃತಿ ಇವುಗಳೆಲ್ಲವೂ ಶ್ರೀಹರಿಯಿಂದ ಇವೆ. ಅವುಗಳಿಗೆ ಶ್ರೀಹರಿಯು **ಸತ್ತಾಪ್ರದ**ನಾಗಿದ್ದಾನೆ. ಶ್ರೀಹರಿಯು ಇಚ್ಛೆ ಇಲ್ಲದಿದ್ದರೆ ಅವು ಯಾವುವು ಇರುವಂತಿಲ್ಲಾ, ಅಲ್ಲದೆ ಸ್ವತಂತ್ರನಾದ ಶ್ರೀಹರಿಯು ಸ್ಥಿಕಾಲದಲ್ಲಿ ಜೀವರುಗಳಿಂದ ಅವರವರಗತಿಗೋಸುಗವಾಗಿ ಕಾಲಕಾಲನುಗುಣವಾಗಿ ಅವರಿಂದ ಕರ್ಮವನ್ನು ಮಾಡಿಸಿ ರಕ್ಷಿಸುವುದರಿಂದ ಶ್ರೀಹರಿಯು ಎಲ್ಲರಿಗೂ ಸತ್ತಾಪ್ರದನಾಗಿದ್ದಾನೆ.

ವರ್ಣಗಳಿಂದಲೂ, ವರ್ಣಗಳ ಕೂಡುವಿಕೆಯಿಂದ ಉಂಟಾಗುವ ಪದಗಳಿಂದಲೂ ಮತ್ತು ಪದಗಳ ಸಮೂಹದಿಂದುಂಟಾಗುವ ವಾಕ್ಯಗಳಿಂದಲೂ ಸರ್ವಶಬ್ದದಿಂದಲೂ ಶ್ರೀಹರಿಯೇ ವಾಚ್ಯನಾಗಿದ್ದಾನೆ. ಇದನ್ನು ಬ್ರಹ್ಮಸೂತ್ರದ ಮೊದಲ ಅಧ್ಯಾಯದಲ್ಲಿ ಯುಕ್ತಿಯುಕ್ತವಾಗಿ ಪ್ರಮಾಣೀಕರಿಸಲಾಗಿದೆ.

ಅರ್ಥಪ್ರತಿಪಾದಕ ವ್ಯವಹಾರವೇ ಶಬ್ದಗಳ ಪ್ರವೃತ್ತಿ ಎನ್ನಬಹುದು. ಅವುಗಳಿಗೆ ಕಾರಣವಾದವುಗಳ ನಿಮಿತ್ತವೆಂದು ಹೇಳಬಹುದಾಗಿದೆ. ಹರಿಯು ಸರ್ವ ಶಬ್ದಗಳ **ಪ್ರವೃತ್ತನೂ** ಹಾಗೂ **ನಿಮಿತ್ತವಾಚ್ಯನೂ** ಆಗಿದ್ದಾನೆ. ಎಲ್ಲಾ ಶಬ್ದಗಳೂ ಹರಿಯನ್ನೇ ಹೇಳುವುದಾದರೆ, ಅನ್ಯವಸ್ತುಗಳ ಪ್ರತಿಪಾದನೆ ಹೇಗೆ ಎಂದರೆ, ಆಗ ಶಬ್ದಗಳ ವ್ಯಾಪ್ತಿ ಪ್ರಕಾರವನ್ನು ತಿಳಿಯಬೇಕಾಗುತ್ತದೆ. ಶಬ್ದಪ್ರವೃತ್ತಿ ಪ್ರಕಾರಗಳು ಯಾವುದೆಂದರೆ ಪರಮಮುಖ್ಯವೃತ್ತಿ, ಮುಖ್ಯವೃತ್ತಿ, ಲಕ್ಷಣ, ಉಪಚಾರ-ರೂಢಿ-ರೂಢಲಕ್ಷಣ ಇವೆಲ್ಲ ಶಬ್ದದ ಪ್ರವೃತ್ತಿ ಪ್ರಕಾರಗಳಾಗಿವೆ. ಈ ವೃತ್ತಿಗಳಲ್ಲಿ ಎಲ್ಲ ಶಬ್ದಗಳು ಪರಮಮುಖ್ಯವೃತ್ತಿ ಶ್ರೀಹರಿಯನ್ನೇ ಹೇಳುತ್ತದೆ. ಶಬ್ದಗಳ ಪ್ರವೃತ್ತಿಯು ಮತ್ತೆ ಯೋಗವೃತ್ತಿ ರೂಢ ಎಂಬುದಾಗಿ ತಿಳಿಸಿದೆ. ಇಂದ್ರಪದವು ಅವಯುವದ ಅರ್ಥದಿಂದಾಗಿ ಸ್ವರ್ಗಾಧಿಪತಿಯನ್ನು ಹೇಳಿದರೆ ಮಹಾಯೋಗವೃತ್ತಿಯಿಂದ ಆ ಪದವು ಶ್ರೀಹರಿಯನ್ನು ಹೇಳುತ್ತದೆ. ಹೀಗಾಗಿ ಶ್ರೀಹರಿಯು ಸರ್ವಶಬ್ದಗಳ ಪ್ರವೃತ್ತಿವಾಚಕನು ಹಾಗೂ ಸರ್ವಶಬ್ದನಿವೃತ್ತಿಕ ವಾಚಕನೂ ಆಗಿದ್ದಾನೆ.

ಶ್ರೀಹರಿಯ ಸರ್ವಗುಣಗಳಿಂದಲೂ ಪೂರ್ಣತಮನಾಗಿದ್ದಾನೆ. ಸಕಲ ಶಬ್ದಗಳೂ ಕೂಡ ಶ್ರೀಹರಿಯ ಗುಣವಾಚಕಗಳಾದ ಕಾರಣ ಶ್ರೀಹರಿಯಲ್ಲಿ ಆ ಎಲ್ಲಾ ಗುಣಗಳು ಕೊಡುತ್ತದೆ. ಯಥಾಯೋಗ್ಯವಾಗಿ ಲಕ್ಷ್ಮೀ ಬ್ರಹ್ಮಾದಿ ಇತರರಲ್ಲಿ ಕಂಡರೂ ಅವು ಯಾವುದೂ ಕೂಡ ಹರಿಯ ಗುಣಪೂರ್ಣತ್ವಕ್ಕೆ ಸಮನಾಗಲು ಎಂದೆಂದಿಗೂ ಸಾಧ್ಯವಿಲ್ಲ. ಗುಣಗಳ ಸಾಮ್ಯಾ ಶ್ರೀಹರಿಗೆ ಯಾರಿಂದಲೂ ಇಲ್ಲವೆಂದಮೇಲೆ ಗುಣಾಧಿಕ್ಯವಂತೂ ಇಲ್ಲವೇ ಇಲ್ಲ. ಹಾಗಾಗಿ ಶ್ರೀಹರಿಯು **ಸರ್ವಗುಣಾತಿ ಪರಿಪೂರ್ಣತಮ**ನಾಗಿದ್ದಾನೆ.

ಚಿಂತೆ, ಸಂತಾಪ, ಅಜ್ಞಾನ-ಅಧೀನತಾ ಬ್ರಮಾ ಇವೇ ಮೊದಲಾದ ದೋಷ ಲೇಶಾದಿಗಳು ಇಲ್ಲದವನ್ನು ಶ್ರೀಹರಿಯೆಂದು ಶ್ರೀಮದಾಚಾರ್ಯರು ತಿಳಿದು ಉಪಾಸಿಸುವರು. ಶ್ರೀಹರಿಯು **ಸರ್ವ್ಯಾಚಿಂತ್ಯ**ನಾಗಿದ್ದಾನೆ. ಅಂದರೆ

ಲಕ್ಷ್ಮಿಯಾಗಲಿ ಅಥವಾ ಬ್ರಹ್ಮಾದಿ ಇತರ ದೇವತೆಗಳಾಗಿ ಯಾರೂಕೂಡ ಆ ಭಗವಂತನ ಬಗೆಯನ್ನೇ ಸಂಪೂರ್ಣವಾಗಿ ಅರಿಯಲಾರರು.

**''ನರವಮಾಪಿ ಪದಾಂಗುಲೀಲಸನ್ ನಖಧೋಃ ರಾಜದನಂತ ಸದ್ಗುಣಮ್''** ಪಂಡಿತಾಚಾರ್ಯರು ತಮ್ಮ ಸುಮಧ್ವವಿಜಯದಲ್ಲಿ ತಿಳಿಸುತ್ತಾ ರಮೆಯು ಕೂಡ ಶ್ರೀಹರಿಯ ಪಾದದ ಬೆರಳಿನ ಮೇಲಿರುವ ದೂಳಿನಲ್ಲಿನ ಗುಣಗಳ ಗಣವನ್ನು ಎಣಿಸಲು ಸಾಧ್ಯವಿಲ್ಲದೆ, ಆಶ್ಚರ್ಯದಿಂದ ಅವನನ್ನೇ ಸೇವಿಸುತ್ತಿದ್ದಾಳೆ ಎಂದಿದ್ದಾರೆ. ಇನ್ನೂ **''ನೈವೋದಾಪುಃ ಗೃಣೋತೊಂತಂ ಯದ್ಗುಣಾನಾಂ ಅಜಾದಯಃ''** ಬ್ರಹ್ಮಾದಿ ಇತರ ದೇವತೆಗಳು ಕೂಡಹರಿಯ ಗುಣವನ್ನು ತಿಳಿಯಲಾರರು ಎಂದು ಶ್ರೀಮದಾಚಾರ್ಯರೇ ದ್ವಾದಶಸ್ತೋತ್ರದಲ್ಲಿ ತಿಳಿಹೇಳಿದ್ದಾನೆ.

ಶ್ರೀ ವ್ಯಾಸರ ಭಾಗವತದಲ್ಲಿನ **''ಮುಹ್ಯಂತಿ ಯಂ ಸೂರಯಃ''** ಎನ್ನುವ ಮಾತುಕೂಡ ಇದನ್ನೇ ಹೇಳುತ್ತಾ ಶ್ರೀಹರಿಯು **ಸರ್ವಾಚಿಂತ್ಯ**ನೆಂಬುದನ್ನು ತಿಳಿಸುತ್ತದೆ.

ಶ್ರೀಹರಿಯು ಸರ್ವೋತ್ತಮನಾಗಿದ್ದಾನೆ. ಅಂದರೆ ಶ್ರೀಹರಿಯು ಎಲ್ಲಾ ದೇವತೆಗಳಿಗಿಂತಲೂ ಉತ್ತಮನಾಗಿದ್ದಾನೆ. ಜಗತ್ತಿನಲ್ಲಿ ಕ್ಷರ ಹಾಗೂ ಅಕ್ಷರರೆಂದು ಎರಡು ಬಗೆಯ ಪುರುಷರು. ಕ್ಷರಪುರುಷರೆಂದರೆ ದೇಹನಾಶವಿರುವ ಬ್ರಹ್ಮಾದಿ ಜೀವರಾಶಿಗಳು. ಅಕ್ಷರ ಪುರುಷರೆಂದರೆ ಶರೀರ ನಾಶಾದಿಗಳಿಲ್ಲದೆ ಜಗಜ್ಜನನಿಯಾದ ರಮಾದೇವಿಯು ಕ್ಷರ ಹಾಗೂ ಅಕ್ಷರರನ್ನು ಮೀರಿದ ಉತ್ತಮ ಪುರುಷ ಅಥವಾ ಸರ್ವೋತ್ತಮ ಪುರುಷ ಅವನೇ ಶ್ರೀಹರಿ ಎಂಬುದನ್ನೇ ಶ್ರೀ ಭಗವದ್ಗೀತೆ ತಿಳಿಸುತ್ತದೆ.

ಶ್ರೀಹರಿಯು ಸರ್ವಾತ್ಯಂತ ವಿಲಕ್ಷಣ ಎಂಬುದನ್ನು **''ನೇತಿ ನೇತಿ''** ಎಂಬ ಶೃತಿಯು ಪ್ರಮಾಣಿಸುತ್ತ ಆ ಹರಿಯು ಸ್ತ್ರಿಯೂ ಅಲ್ಲ ಪುರುಷನೂ ಅಲ್ಲ,

ನಪುಂಸಕನೂ ಅಲ್ಲಾ ಎಂದು ಹೇಳುತ್ತಾ, **ಸರ್ವಾತ್ಯಂತ** ವಿಲಕ್ಷಣನೆಂದು ತಿಳಿಸುತ್ತದೆ.

ಶ್ರೀಹರಿಯು ತನ್ನಲ್ಲಿರುವ ಅನಂತವಾದ ಗುಣರೂಪ ಕ್ರಿಯಾದಿಗಳು ಪರಸ್ಪರ ಒಂದಕ್ಕೊಂದು ಭೇದವಿಲ್ಲ. ಒಂದೊಂದು ರೂಪಕ್ಕೂ ಹಾಗೂ ಅದರ ಅವಯವ, ಗುಣಕ್ರಿಯೆಗಳಿಗೂ ಯಾವ ಭೇದವಿಲ್ಲವೆಂದು ಎಲ್ಲ ರೂಪದ ಗುಣಕ್ರಿಯಾದಿಗಳಿಗೂ ಪರಸ್ಪರ ಭೇದವಿಲ್ಲವೆಂದೂ, ಹಾಗೂ ಶ್ರೀಹರಿಯ ಜ್ಞಾನ, ಆನಂದಾದಿಗಳೂ ಕೂಡ ಪರಸ್ಪರ ಅಭಿನ್ನವೇ ಆಗಿದೆ ಎಂಬುದನ್ನು **''ನೇಹ ನಾನಾಸ್ತಿ ಕಿಂಚನ''** ಎಂದು ಶೃತಿ ತಿಳಿಸಿದರೆ, **''ವಿಷ್ಣುರೇವ ಸ್ವರೂಪಾಣಾಂ ತದ್ಗುಣಾನಾಂ ತಥೈವ ಚ ತಥೈವ ಶಿರ ಆಧೀನಾಂ ನೈವ ಭೇದೋಸ್ತಿಕಶ್ಚನ''** ವೆಂದಿದೆ ಸ್ಮೃತಿವಾಕ್ಯ. ಹೀಗಾಗಿ ಶ್ರೀಹರಿಯು **ಸ್ವಗತಭೇದ ವಿವರ್ಜಿತನಾಗಿದ್ದಾನೆ.** ಈ ಎಲ್ಲಾ ಲಕ್ಷಣಗಳಿಂದ ಲಕ್ಷಿತನಾದ ಶ್ರೀಹರಿಯನ್ನು ನೋಡುವವರು ಶ್ರೀಮದಾ-ನಂದತೀರ್ಥ ಭಗವತ್ಪಾದಾಚಾರ್ಯರು. ಅರ್ಥಾತ್ ನಿತ್ಯಾಪರೋಕ್ಷಿಗಳು.

## ೧೪. ಅಭಿಮಾನಾದಿ ಸರ್ವದೋಷದೂರಾಣಾಂ ಅಸೂಯೇಷ್ಯಾದ್ಯ-ಶೇಷಮನೋದೋಷ ನಿವರ್ತಕಾನಾಂ

**ಪ್ರತಿಪದಾರ್ಥ :-** ಅಭಿಮಾನಾದಿ–ಅಭಿಮಾನವೇ ಮೊದಲಾದ, ಸರ್ವದೋಷ ದೂರಾಣಾಂ–ಸಮಸ್ತ ದೋಷಗಳಿಂದಲೂ ದೂರನಾದ, ಅಸೂಯೇಷ್ಯಾದಿ–ಈರ್ಷ್ಯೆ, ಅಸೂಯೆ ಇವೇ ಮೊದಲಾದ, ಅಶೇಷ ಮನೋದೋಷ ನಿವಾರ್ಪಕಾನಾಂ– ಸಮಸ್ತವಾದ ಮನೋದೋಷಗಳನ್ನು ಪರಿಹರಿಸುವವರಾದ,

**ತಾತ್ಪರ್ಯ :-** ಬ್ರಹ್ಮವಾಯುಗಳಿಗೆ ಯದ್ಯಪಿ ಶರೀರಾದಿಗಳು ಇದ್ದರೂ ಕೂಡ ಅದರ ಮೇಲೆ ಅವರಿಗೆ ಅಭಿಮಾನವಿಲ್ಲದ ಕಾರಣ ದೇಹವಿದ್ದರೂ ಅಶರೀರಿಗಳು ಎಂದೇ ಅವರನ್ನು ಕರೆಯುತ್ತಾರೆ. **''ಬ್ರಹ್ಮಾ ನಿರಭಿಮಾನಿತ್ವಾತ್ ಶಾರೀರೋಽಪ್ಯಶರೀವಾನ್.''**

ಅಭಿಮಾನವೆಂದರೆ ರಾಗದ್ವೇಷಾದಿಗಳಿಂದ ಹುಟ್ಟಬಹುದಾದ ಸುಖ–ದುಃಖ ಅಥವಾ ಜಯೋಪಜಯವೇ ಮೊದಲಾದ ದ್ವಂದ್ವಗಳಲ್ಲಿ ಅಹಂ ಮಮತಾ ಉಳ್ಳವರು. ಅಂದರೆ ದ್ವಂದ್ವಭಾವಗಳಿಗೆ ನಾನೇ ಸ್ವತಂತ್ರನೆಂಬ ಕಾರಣರೆಂದು ತಿಳಿಯುವುದು ಮತ್ತು ಸ್ವೇತರವಸ್ತುಗಳು ಹಾಗೂ ದೇಹೇಂದ್ರಿಯಾದಿಗಳು ತನ್ನ ಅಧೀನವೆಂದು ತಿಳಿಯುವುದು. ಈ ಅಹಂ ಮಮತಾದಿಗಳೇ ಜೀವನನ್ನು ಸಂಸಾರದಲ್ಲಿ ಸ್ತುತಿಸುವ ಮೂಲ ಕಾರಣಗಳಾಗಿವೆ. ವಿಷ್ಣುವು ಒಬ್ಬನೇ ಸ್ವತಂತ್ರನು, ಸಮಸ್ತ ಜಗತ್ತು ಆತನ ವಶದಲ್ಲಿದೆ. ಹೀಗಿದ್ದು ತನಗೆ ಕಿಂಚಿತ್ತು ಸ್ವತಂತ್ರ ಇದೆ, ಎಂದು ತಿಳಿಯುವುದೇ ಅಹಂಕಾರ ಎನಿಸುತ್ತದೆ. ಈ ಬಗೆಯ ಯಾವುದೇ ದೋಷಾದಿಗಳು ವಾಯು, ಬ್ರಹ್ಮರಲ್ಲಿ ಇಲ್ಲ, ಆದಕಾರಣ ಅವರ ತಮ್ಮ ಭಕ್ತರಲ್ಲಿ ಇರಬಹುದಾದ ಅಸೂಯೆ ಮೊದಲಾದ ದೋಷಗಳನ್ನು ಕಳೆಯುವವರಾಗಿದ್ದಾರೆ. ಇಲ್ಲಿ ಅಸೂಯೆ ಎಂದರೆ ಅನ್ಯರಲ್ಲಿರುವ ಸದ್ಗುಣವನ್ನು ಗಣನೆಗೆ ತಾರದೆ ಇಲ್ಲದ ದೋಷಾದಿಗಳನ್ನು ಆರೋಪಿಸುವುದೇ ಆಗಿದೆ. ಪರರ ಉತ್ಕರ್ಷವನ್ನು ಸಹಿಸದೇ ಉದ್ವಿಗ್ನರಾಗುವುದೇ ಈರ್ಷ್ಯೇ. ಭಕ್ತರಲ್ಲಿರುವ ಈ ದೋಷಾದಿಗಳನ್ನು ವಾಯುಬ್ರಹ್ಮರು ದೂರೀಕರಿಸುತ್ತಾರೆ.

**೧೫. ನಿತ್ಯಾಪರೋಕ್ಷೀಕೃತರಮಾಯುಕ್ತಾಶೇಷಭಗವದ್ರೂಪಾಣಾಂ ಅತ ಏವ ವಿಲೀನಾಶೇಷಪ್ರಕೃತಿಬಂಧಾನಾಂ ಅತ ಏವ ದೂರೋತ್ಸಾರಿತಾಶೇಷಾನಿಷ್ಟಾನಾಂ ಅತ ಏವಾಶೇಷಭಕ್ತಾಶೇಷನಿಷ್ಟನಿವರ್ತಕಾನಾಂ.....**

**ಪ್ರತಿಪದಾರ್ಥ :-** ನಿತ್ಯಅಪರೋಕ್ಷೀಕೃತ–ನಿತ್ಯದಲ್ಲಿಯೂ ಹರಿಯ ಸಾಕ್ಷಾತ್ಕಾರವುಳ್ಳ, ರಮಾಯುಕ್ತ ಅಶೇಷ ಭಗವದ್ರೂಪಾಣಾಂ–ರಮಾದೇವಿಯರಿಂದ ಕೂಡಿದ ಸಮಸ್ತವಾದ ಹರಿಯ ರೂಪಗಳುಳ್ಳವರಾದ, ಅತ ಏವ–ಆದ್ದರಿಂದಲೇ, ವಿಲೀನಾಶೇಷ ಪ್ರಕೃತಿ ಬಂಧಾನಾಂ–ಕಳೆದುಕೊಳ್ಳಲ್ಪಟ್ಟ ಸಕಲ ಪ್ರಕೃತಿ ಬಂಧನವುಳ್ಳವರಾದ, ಅಥ ಏವ–ಹೀಗೆ ಪ್ರಕೃತಿಯ ಬಂಧನ ರಹಿತರಾದ್ದರಿಂದಲೇ, ದೂರೋತ್ಸಾರಿತ–ದೂರಸರಿಸಲ್ಪಟ್ಟ ಅಶೇಷ ಅನಿಷ್ಟಾನಾಂ–ಸಕಲ ಬಗೆಯ

ಅನಿಷ್ಟಗಳುಳ್ಳವರಾದ, ಅತ ಏವ–ಹೀಗೆ ಸರ್ವ ಅನಿಷ್ಟಗಳಿಂದಲೂ ದೂರವುಳ್ಳವರಾದ್ದರಿಂದಲೇ, ಅಶೇಷ ಭಕ್ತ–ಸಕಲ ಭಕ್ತರ, ಅಶೇಷ ಅನಿಷ್ಟ ನಿವರ್ತಕಾನಾಂ–ಸಕಲ ಅನಿಷ್ಟಗಳನ್ನು ನಿವಾರಿಸುವವರಾದ,

**ತಾತ್ಪರ್ಯ** :- ಬ್ರಹ್ಮಪದವಿಗೆ ಯೋಗ್ಯರಾದ ಋಜ್ವಾದಿ ತಾತ್ವಿಕ ದೇವತೆಗಳು.ಅನಾದಿಕಾಲದಿಂದ ಅಪರೋಕ್ಷ ಜ್ಞಾನವುಳ್ಳವರು. ಹೀಗಾಗಿ ಅವರು ನಿತ್ಯಾಪರೋಕ್ಷಿಗಳಾಗಿದ್ದಾರೆ.

ಅವರ ಬ್ರಹ್ಮಾಪರೋಕ್ಷ ಎಂತಹುದು ಎಂದರೆ ಸರ್ವತ್ರದಲ್ಲಿಯೂ ರಮೆಯಿಂದ ಸಹಿತನಾದ ನಾರಾಯಣನನ್ನೇ ನೋಡುತ್ತಾರೆ. ಶ್ರೀಹರಿಯನ್ನು ಇದೇ ರೀತಿಯಿಂದ ಉಪಾಸಿಸಬೇಕು. ಅಲ್ಲದೆ ಹರಿಯ ಪರಿವಾರದಲ್ಲಿ ಪ್ರಧಾನರಾದ ಶ್ರೀ ವಾಯುದೇವರನ್ನು ಜೊತೆಯಲ್ಲಿಯೇ ಉಪಾಸಿಸಬೇಕು. ಏಕೆಂದರೆ ಅವರು ಹರಿಯ ಪ್ರತಿಮಾಸ್ಥಾನೀಯರಾಗಿದ್ದಾರೆ. ಉಪಾಸನಾವಿಧಿಯು ಈ ಬಗೆಯ ಉಪಾಸನೆಯನ್ನೇ ವಿಧಿಸಿದೆ. ಮನುಷ್ಯನ ಹೃದಯಸ್ಥಿತವಾದ ಮೂಲೇಶನ ಅಡಿದಾವರೆಯಲ್ಲಿ ಮುಖ್ಯಪ್ರಾಣರು ಒಂದು ರೂಪದಿಂದ ಇದ್ದು ಸದಾ ಶ್ರೀಹರಿಯನ್ನು ಸೇವಿಸುತ್ತಾರೆ. ಹೀಗೆ ರಮೆಯಿಂದ ಯುಕ್ತವಾದ ಅಶೇಷವಾದ ಭಗವಂತನ ರೂಪಗಳನ್ನು ನಿತ್ಯದಲ್ಲಿಯೂ ಅಪರೋಕ್ಷೀಕರಿಸಿಕೊಂಡವರು ವಾಯುದೇವರು. ಈ ಬಗೆಯ ಅಪರೋಕ್ಷವು ನಿತ್ಯದಲ್ಲಿರುವ ಕಾರಣ ಅವರು ಪ್ರಾಕೃತಬಂಧನಕ್ಕೆ ಒಳಪಡದವರಾಗಿದ್ದಾರೆ. ಈ ಬಗೆಯ ಪ್ರಾಕೃತ ಬಂಧನಾದಿಗಳು ಶ್ರೀವಾಯು ಬ್ರಹ್ಮಾದಿಗಳಿಗೆ ಯಾವ ಕಾಲದಲ್ಲಿ ಇಲ್ಲ.

ಅನಿಷ್ಟಪ್ರಾಪ್ತಿಗೆ ಹಿಂದಿನ ಜನ್ಮದ ಪಾಪಗಳೇ ಕಾರಣವಾಗಿರುತ್ತದೆ. ಪಾಪಗಳು ಅಪಹೃತವಾದರೆ ಅನಿಷ್ಟಪ್ರಾಪ್ತಿಯೂ ಕೂಡ ಸ್ವತಃ ನಿಲ್ಲುತ್ತದೆ. ಶ್ರೀಬ್ರಹ್ಮವಾಯುಗಳಿಗೆ ಭಗವಂತನ ಅಪರೋಕ್ಷವು ನಿತ್ಯದಲ್ಲಿರುವ ಕಾರಣದಿಂದಲೇನೆ, ಅವರ ಸಕಲ ಅನಿಷ್ಟಗಳೂ ಕೂಡ ಬಹುದೂರಕ್ಕೆ ತಳ್ಳಲ್ಪಟ್ಟಿವೆ. ತಮ್ಮ ಸಕಲ ಅನಿಷ್ಟಾದಿಗಳನ್ನು ನಿತ್ಯ ಅಪರೋಕ್ಷದಿಂದ ತಳ್ಳಲ್ಪಟ್ಟವರಾಗಿ ಉಳಿದ

ತಮ್ಮನ್ನು ಉಪಾಸಿಸುವ ಅಶೇಷ ಭಕ್ತರುಗಳ ಅಶೇಷವಾದ ಅನಿಷ್ಟಗಳನ್ನು ಚೆನ್ನಾಗಿ ನಿವಾರಿಸುತ್ತಾರೆ. ಇದನ್ನು ಪಂಡಿತಾಚಾರ್ಯರು ವಾಯುಸ್ತುತಿಯಲ್ಲಿ ''**ಜನ್ಮಾಧಿ ವ್ಯಾಧ್ಯುಪಾಧಿ ಪ್ರತಿಹತಿ ವಿರಹ ಪ್ರಾಪಕಾಣಾಂ**'' ಎಂಬುದಾಗಿ ತಿಳಿಸಿದ್ದಾರೆ.

**೧೬. ಪ್ರಣವೋಪಾಸಕಾನಾಂ ಅಸ್ಮದಾದಿಗುರೂಣಾಂ ಶ್ರೀಮದಾನಂದ-ತೀರ್ಥ ಶ್ರೀಮಚ್ಚರಣಾನಾಂ ಅಂತರ್ಯಾಮಿನ್.....**

**ಪ್ರತಿಪದಾರ್ಥ :-** ಪ್ರಣವೋಪಾಸಕಾನಾಂ–ಪ್ರಣವ ಮಂತ್ರೋಪಾಸಕರೂ, ಅಸ್ಮದಾದಿ- ಗುರೂಣಾಂ – ನಾವೇ (ಶ್ರೀ ಮಂತ್ರಾಲಯ ಪ್ರಭುಗಳು) ಮೊದಲಾದ ಸಕಲ ಸಾತ್ವಿಕರಿಗೆ ಗುರುಗಳಾದ, ಶ್ರೀಮದಾನಂದ- ತೀರ್ಥ ಶ್ರೀಮಚ್ಚರಣಾನಾಂ–ಶ್ರೀ ಆನಂದತೀರ್ಥ ಭಗವತ್ಪಾದರ, ಅಂತರ್ಯಾಮಿನ್– ಅಂತರ್‌ನಿಯಾಮಕನಾದ, ಹೇ ನಾರಾಯಣ!

**ತಾತ್ಪರ್ಯ :-** ಅಕಾರ, ಉಕಾರ–ಮಕಾರದಿಂದ ಕೂಡಿದ್ದು ''ಓಂ''ಕಾರವೆಂದು ತಿಳಿಯಲ್ಪಡುವ ಓಂಕಾರವು ಅನೇಕಾನೇಕ ಅಂಗಗಳಿಂದ ಕೂಡಿದೆ. ನಾದ, ಬಿಂದು, ಘೋಷವೇ ಮೊದಲಾದ ಅಂಶಗಳಲ್ಲದೆ ಓಂಕಾರವು ಹರಿಯ ಅನೇಕಾನೇಕ ಗುಣಗಳನ್ನು ಪ್ರತಿಪಾದಿಸುತ್ತದೆ. ಹರಿಯ ಅನಂತಾನಂತಗುಣೋಪಾಸನೆ ಹಾಗೂ ಗುಣೋಪಸಂಹಾರ ರೂಪದ ಈ ಪ್ರಣವವನ್ನೇ ಉಪಾಸನೆ ಮಾಡುವ ಸಾಮರ್ಥ್ಯ ಉಳ್ಳವರು ಬ್ರಹ್ಮಪದಾಧಿಕಾರಿಗಳಾದ ವಾಯುದೇವರೆ ಮುಖ್ಯಾಧಿಕಾರಿಗಳು ಎಂದು ಪಂಡಿತಾ-ಚಾರ್ಯರು ಸುಮಧ್ವವಿಜಯದಲ್ಲಿ ತಿಳಿಸುತ್ತಾ ''**ಅನಂತ ಮಾತ್ರಾಂತ ಮುದಾಹರಂತಿ ಯಂ ತ್ರಿಮಾತ್ರಪೂರ್ವಂ ಪ್ರಣವೋಚ್ಚಯಂ ಬುಧಾಃ । ತದಾಽಭವದ್ವಾವಿ ಚತುರ್ಮುಖಾಕೃತಿರ್ಜಪಾಧಿಕಾರೀ ಯತಿರಸ್ಯ ಸೂಚಿತಾ ॥**'' ಎಂದಿದ್ದಾರೆ. ಅವರೇ ನಮ್ಮ ಆನಂದತೀರ್ಥ ಭಗವತ್ಪಾದಾಚಾರ್ಯರು.

ಭಾರತ ತಾತ್ಪರ್ಯ ನಿರ್ಣಯದಲ್ಲಿ ಆಚಾರ್ಯರು ತಿಳಿಸಿರುವ ಗುರುಗಳ ಲಕ್ಷಣರೀತಿ ವಿಚಾರಮಾಡಿದರೆ ಯಾರು ನಿಸ್ಸಂಶಯಜ್ಞಾನ ಉಳ್ಳವರೋ ಹಾಗೂ

ಯಾರು ಶಿಷ್ಯರ ಎಲ್ಲಾ ಸಂಶಯಗಳನ್ನು ಪರಿಹರಿಸಬಲ್ಲಿರೋ ಅವರನ್ನೇ ಗುರುಗಳೆಂದು ಜ್ಞಾನಿಗಳು ಕರೆಯುತ್ತಾರೆ. ಈ ಲಕ್ಷಣವು ಮುಖ್ಯವಾಗಿ ಬ್ರಹ್ಮದೇವನಲ್ಲಿ ಮಾತ್ರ ಕಾಣಬಹುದಾಗಿದೆ. ಅಂತಃ ಬ್ರಹ್ಮದೇವರನ್ನು ಹೊರತು ಪಡಿಸಿದರೆ ಇತರ ದೇವತೆಗಳೂ ಯಥಾಯೋಗ್ಯ ಲಕ್ಷಣದಿಂದ ಕೂಡಿ ತಮಗಿಂತ ಸ್ವಾವವರಿಗೆ ಗುರುಗಳಾಗಿರುತ್ತಾರೆ. ಬ್ರಹ್ಮಪದವಿಗೆ ಅರ್ಹರಾದ ಆಚಾರ್ಯರು ನಮ್ಮ ಗುರುಗಳು ಎಂದು ಹೇಳುತ್ತಾ ಮಂತ್ರಾಲಯ ಶ್ರೀಗಳು, ಗದ್ಯದಲ್ಲಿ **''ಅಸ್ಮದಾದಿ ಗುರೂಣಾಂ ಶ್ರೀಮದಾನಂದತೀರ್ಥ ಶ್ರೀಮಚ್ಚರಣಾನಾಂ''** ಎಂದಿದ್ದಾರೆ. ಚರಣ-ಪಾದ ಈ ಶಬ್ದವು ಉತ್ತಮರ ಸ್ವರೂಪವನ್ನು ಬಣ್ಣಿಸಿಹೇಳುತ್ತದೆ. ಶ್ರೀಮಚ್ಚರಣರು ಎಂದರೆ ಶ್ರೀಪಾದಂಗಳವರೆಂದರ್ಥ. ಜ್ಞಾನಭಕ್ತಿಯೇ ಮೊದಲಾದುವು ಸ್ವರೂಪಭೂತವುಳ್ಳ ಸಂಪತ್ತು ಯಾರಲ್ಲಿದೆಯೋ ಅವರೇ ಶ್ರೀಪಾದರು. ಅಂತಹ ಆಚಾರ್ಯರಾದ ಆನಂದತೀರ್ಥರ ಅಂತರ್ಯಾಮಿಯಾದ ಹೇ ನಾರಾಯಣ.

೧೭. **ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವಾತ್ಮಕ ಶ್ರೀಮಧ್ವವಲ್ಲಭ ಶ್ರೀಲಕ್ಷ್ಮೀವೇದವ್ಯಾಸಾತ್ಮಕ ಅಂಡಸ್ಥಿತಾನಂತರೂಪಾವಯುವ ಗುಣಕ್ರಿಯಾಜಾತ್ಯವಸ್ಥಾವಿಶಿಷ್ಟ ರಮಾಯುಕ್ತ ಕ್ಷೀರಾಬ್ಧಿಶೇಷಶಾಯಿ ಶ್ರೀಪದ್ಮನಾಭಾತ್ಮಕ.....**

**ಪ್ರತಿಪದಾರ್ಥ :-** ಅನಿರುದ್ಧ-ಪ್ರದ್ಯುಮ್ನ-ಸಂಕರ್ಷಣ-ವಾಸುದೇವಾತ್ಮಕ- ಅನಿರುದ್ಧಾದಿ ಶ್ರೀಹರಿಯ ನಾಲ್ಕು ರೂಪವುಳ್ಳವನೂ, ಶ್ರೀಮಧ್ವವಲ್ಲಭ - ಮಧ್ವಾಚಾರ್ಯರಿಗೆ ಅತ್ಯಂತ ಪ್ರಿಯತಮ ಸ್ವಾಮಿಯೂ, ಶ್ರೀಲಕ್ಷ್ಮೀವೇದವ್ಯಾಸಾತ್ಮಕ - ಶ್ರೀಸಿರಿದೇವಿ ಸಹಿತನಾದ ಶ್ರೀವೇದವ್ಯಾಸರೂಪನೂ, ಅಂಡಸ್ಥಿತಾನಂತ-ರೂಪಾವಯುವ ಗುಣಕ್ರಿಯಜಾತ್ಯಾವಸ್ಥಾ ವಿಶಿಷ್ಠ- ಇಡೀ ಬ್ರಹ್ಮಾಂಡದಲ್ಲಿನ ಹರಿಯ ಅನಂತ ರೂಪಗಳ ಕರಚರಣಾದಿ ಅವಯುವಗಳು, ಅಲ್ಲದೆ ಜ್ಞಾನಾನಂದಾದಿ-ಗುಣಗಳು, ಸೃಷ್ಟ್ಯಾದಿ ಕ್ರಿಯೆಗಳು, ಇವುಗಳ ಜಾತಿ ಅವಸ್ಥೆಗಳು ಇವುಗಳುಳ್ಳವನೂ, ರಮಾಯುಕ್ತ-ರಮೆಯ ಸಹಿತನಾಗಿ, ಕ್ಷೀರಾಬ್ಧಿ ಶೇಷಶಾಯಿ- ಕ್ಷೀರಸಾಗರ ಮಧ್ಯದಲ್ಲಿ ಶೇಷದೇವರ ಮಂಚದಲ್ಲಿ ಮಲಗಿರುವ ಶ್ರೀಪದ್ಮನಾಭರೂಪದಿಂದ ಅಭಿನ್ನನೂ,

ತಾತ್ಪರ್ಯ :- ಇಲ್ಲಿಯ ತನಕ ಪ್ರಣವೋಪಾಸಕರಾದ ಹಾಗೂ ವಾಯುದೇವರ ಮೂರನೇ ಅವತಾರೀಭೂತರಾದ ಶ್ರೀಮದಾನಂದತೀರ್ಥರನ್ನು ಇಷ್ಟೆಲ್ಲಾ ವಿಶೇಷಣಗಳಿಂದ ಅವರು ಯೋಗ್ಯತಾದಿಗಳನ್ನು ವರ್ಣಿಸಿ ಅವರು ನಮ್ಮ ಗುರುಗಳೆಂಬುದನ್ನು ಧೃಢಪಡಿಸಿ, ಅಂತಹ ಗುರುಗಳಾದ ಆಚಾರ್ಯರು ತಾವು ಮಾಡುವ ಜಪಾ ಹಾಗೂ ಉಪಾಸನೆಯನ್ನು ತಿಳಿಸಲು, ಮುಂದಿನ ಕೆಲವು ವಾಕ್ಯಗಳನ್ನು ಆಚಾರ್ಯರಿಂದ ಉಪಾಸಿತವಾದ ಹರಿಯ ರೂಪಗಳನ್ನು ತಿಳಿಸುತ್ತದೆ.

ಹರಿಯು ತನ್ನ ಮೂಲರೂಪದಿಂದ ಜಗತ್ತಿನ ಸೃಷ್ಟಾದಿ ಕಾರ್ಯಗಳಿಗಾಗಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎಂಬ ರೂಪಗಳನ್ನು ಅಭಿವ್ಯಕ್ತಗೊಳಿಸಿದೆ. ಹೀಗೆ ವ್ಯಕ್ತಗೊಳಿಸಿದ ರೂಪ ಹಾಗೂ ಆಚಾರ್ಯರಿಗೆ ಪ್ರಿಯರಾದ ವೇದವ್ಯಾಸರೂಪ. ಪರಸ್ಪರ ಅಭಿನ್ನವೇ ಆಗಿದೆ. ಬ್ರಹ್ಮಾಂಡದಲ್ಲಿ ಶ್ರೀಹರಿಯ ಅನಂತ ರೂಪಗಳಿವೆ. ಆ ಎಲ್ಲಾ ಹರಿಯ ರೂಪಗಳು ಪರಸ್ಪರ ಅಭಿನ್ನವಾದ ಹರಿಯ ಬಗೆಬಗೆ ರೂಪದಲ್ಲಿ ಕರಚರಣಾದಿ ಅವಯವಗಳು ಹಾಗೂ ಆ ರೂಪದ ಕ್ರಿಯಾಗುಣಾದಿಗಳಿಗೂ ಯಾವ ರೀತಿ ಭೇದವೂ ಇಲ್ಲಾ. ಮತ್ತು ಹರಿಯ ಆ ಎಲ್ಲಾ ರೂಪಗಳು ಶ್ರೀರಮೆಯಿಂದ ಸಹಿತವಾಗಿದೆ. ಕ್ಷೀರಸಾಗರದ ಮಧ್ಯದಲ್ಲಿನ ಶ್ವೇತದೀಪದಲ್ಲಿರುವ ರಮಾಸಹಿತ ಪದ್ಮನಾಭರೂಪವೂ ಇತರ ಸರ್ವರೂಪಗಳಿಂದ ಅಭಿನ್ನವಾಗಿಯೇ ಇದೆ.

೧೮. **ಅಂಡಾದ್ಬಹಿರಭಿವ್ಯಕ್ತ ಶುದ್ಧ ಸೃಷ್ಟಿತ್ವೇನಾಭಿಮತ ಶ್ರೀಚತುರ್ಮುಖ ಮುಖ್ಯಪ್ರಾಣೋಪಾಸ್ಯತ್ವಾದ್ಯನೇಕ ಪ್ರಯೋಜನಕಾನಂತರೂಪ ಮೂಲಭೂತ ತಥಾಶೇಷಜಗತ್ಪಾಲನ ಪ್ರಯೋಜನಕ ಶಾಂತಿಪತ್ಯ- ನಿರುದ್ಧಮೂಲಭೂತ ಅಶೇಷಜಗತ್ಸೃಷ್ಟಿಪ್ರಯೋಜನಕ ಕೃತಿಪತಿ- ಪ್ರದ್ಯುಮ್ನಮೂಲಭೂತ ಜಗತ್ಸಂಹಾರಪ್ರಯೋಜನಕ ಜಯಾಪತಿ ಸಂಕರ್ಷಣಮೂಲಭೂತ.....**

**ಪ್ರತಿಪದಾರ್ಥ :-** ಅಂಡಾದ್ಬಹಿರಭಿವ್ಯಕ್ತಬ್ರಹ್ಮಾಂಡದ ಹೊರಗೆ ವ್ಯಕ್ತವಾದ, ಶುದ್ಧಸೃಷ್ಟಿತ್ವೇನಾಭಿಮತ–ಶುದ್ಧ ಸೃಷ್ಟಿಯೆಂದು ತಿಳಿಯಲ್ಪಡುವ, ಶ್ರೀ ಚತುರ್ಮುಖ ಮುಖ್ಯಪ್ರಾಣೋಪಾಸ್ಯತ್ವಾದ್ಯನೇಕ ಪ್ರಯೋಜನಕ–ಚತುರ್ಮುಖ ಬ್ರಹ್ಮದೇವರು ಹಾಗೂ ಪ್ರಾಣದೇವರಿಂದ ಉಪಾಸನೆಯೇ ಮೊದಲಾದ ಅನೇಕಾನೇಕ ಪ್ರಯೋಜನಗಳುಳ್ಳ, ಅನಂತಾನಂತ ರೂಪ–ಮೂಲಭೂತ–ಅಸಂಖ್ಯವಾದ ರೂಪಗಳಿಗೆ ಮೂಲವೂ, ತಥಾ–ಹಾಗೆ ಅಶೇಷ ಜಗತ್‌ಪಾಲನ ಪ್ರಯೋಜನಕ–ಸಕಲ ಜಗದ ರಕ್ಷಣೆಯೇ ಮೊದಲಾದ ಅನೇಕ ಪ್ರಯೋಜನಗಳುಳ್ಳ, ಶಾಂತಿಪತಿ ಅನಿರುದ್ಧ ಮೂಲಭೂತ–ಶಾಂತಿನಾಮಕ ಶ್ರೀಲಕ್ಷ್ಮೀಪತಿಯಾದ ಅನಿರುದ್ಧನ ಮೂಲರೂಪವು, ಅಶೇಷ ಜಗತ್ಸೃಷ್ಟಿ ಪ್ರಯೋಜನಕ ಸಕಲ ಜಗದ ಸೃಷ್ಟಿಯೇ ಮೊದಲಾದ ಅನೇಕ ಪ್ರಯೋಜನಕವಾಗಿಯುಳ್ಳ, ಕೃತಿಪತಿ ಪ್ರದ್ಯುಮ್ನ ಶ್ರೀಕೃತಿನಾಮಕ ಲಕ್ಷ್ಮೀದೇವಿಯ ಪತಿಯಾದ ಪ್ರದ್ಯುಮ್ನ ನಾಮಕ ಶ್ರೀಹರಿಯ ಮೂಲರೂಪವು, ಜಗತ್‌ಸಂಹಾರಪ್ರಯೋಜನಕ–ಸಕಲ ಜಗದ ಸಂಹಾರವೇ ಪ್ರಯೋಜನವಾಗಿ ಇರುವ, ಜಯಾಪತಿ ಸಂಕರ್ಷಣ ಮೂಲಭೂತ–ಜಯನಾಮಕ ಸಿರಿದೇವಿಯ ರಮಣರಾದ ಸಂಕರ್ಷಣ ಮೂಲರೂಪವು.

**ತಾತ್ಪರ್ಯ :-** ಪ್ರಳಯಕಾಲದ ರಾತ್ರಿಯ ಕಡೆಯ ಭಾಗದಲ್ಲಿ ದುರ್ಗಾರೂಪಳಾದ ಶ್ರೀರಮೆಯು ಶ್ರೀಹರಿಯನ್ನು ಸ್ತುತಿಸಿ ಪ್ರಾರ್ಥಿಸಿದಾಗ ಶ್ರೀಹರಿಯು ಯೋಗನಿದ್ರೆಯಿಂದ ಎಚ್ಚೆತ್ತವನಾಗಿ ಸೃಷ್ಟಿಕಾರ್ಯವನ್ನು ಪ್ರಾರಂಭಿಸುತ್ತಾನೆ. ಆ ಸೃಷ್ಟಿಯನ್ನು ನಿರ್ವಹಿಸುವ ಸಲುವಾಗಿ ವಾಸುದೇವಾದಿ ತನ್ನ ರೂಪಗಳನ್ನು ಪ್ರಕಟಮಾಡುತ್ತಾನೆ. ಈ ಬಗೆಯ ರೂಪಗಳ ಪ್ರಕಟಗೊಳ್ಳುವಿಕೆಯೇ ಈಶಸೃಷ್ಟಿ ಅಥವಾ ಶುದ್ಧಸೃಷ್ಟಿಯು. ಹೀಗೆ ಮೂಲರೂಪದಿಂದ ಹೊರಬರುವ ಹರಿಯ ಅನಿರುದ್ಧಾದಿ ನಾಲ್ಕು ರೂಪಗಳ ಸೇವೆಗಾಗಿ ಶ್ರೀರಮೆಯೂ ಕೂಡ ತಾನು ಮಾಯಾ, ಜಯಾ, ಕೃತಿ ಹಾಗೂ ಶಾಂತಿರೂಪಗಳಿಂಧ ಪ್ರಕಟಗೊಳ್ಳುತ್ತಾಳೆ. ಈ ಎಲ್ಲಾ ಹರಿರಮೆಯ ರೂಪಗಳು ಸತ್‌–ಚಿತ್‌ನಿಂದ ಕೂಡಿದವುಗಳಾಗಿವೆ.

ಹಿಂದಿನ ಕಲ್ಪದಲ್ಲಿ ಸಾಧನವನ್ನು ಮುಗಿಸಿ ಲಿಂಗದೇಹವನ್ನು ತ್ಯಜಿಸಿ ಪ್ರಳಯಕಾಲದಲ್ಲಿ ಬ್ರಹ್ಮದೇವರೊಂದಿಗೆ ವಿರಜಾನದಿಯಲ್ಲಿ ಸ್ನಾನ ಮಾಡಿ

ಲಿಂಗದೇಹವನ್ನು ಕಳೆದುಕೊಂಡು ಶ್ರೀಹರಿಯ ಉದರವನ್ನು ಪ್ರವೇಶಿಸಿ, ಧ್ಯಾನವನ್ನು ಮಾಡುತ್ತಾ ಸ್ವಯೋಗ್ಯವಾದ ವೈಕುಂಠಾದಿ ಲೋಕಗಳಲ್ಲಿ ವಿಹಾರ ಅರ್ಹ ಜೀವರಿಗೆ ಮಾಡಿಸಿ ಶ್ವೇತದ್ವೀಪದಲ್ಲಿರುವ ತನ್ನ ರೂಪದ ದರ್ಶನ ಕೊಟ್ಟು ಅವರವರ ಸ್ಥಾನವನ್ನು ಪೊಂದಿಸುವನು.

ಸಕಲಪ್ರಾಣಿಗಳ ಒಳಗಿರುವ ಕೃತೀಪತಿ ಪ್ರದ್ಯುಮ್ನನು ಕಾಮೋದ್ದೀಪಕನಾಗಿ ಪುರುಷಪ್ರಾಣಿಗಳ ರೇತತೋದ್ವಾರ, ಜೀವನನ್ನು ಮಾತೃಗರ್ಭವನ್ನು ಪ್ರವೇಶಮಾಡಿಸಿ ಆ ಜೀವನನ್ನು ತಾಯಿಯ ಗರ್ಭದಲ್ಲಿ ಸ್ಥಾಪಿಸುವನು. ಇತನೇ ಸಮಸ್ತವಾದ ಜಗತ್ತಿಗೆ ಪಿತನಾಗಿದ್ದಾನೆ. ಹಾಗಾಗಿ ಪ್ರದ್ಯುಮ್ನ ಸೃಷ್ಟಿಕರ್ತನೆನಿಸುತ್ತಾನೆ. ಹುಟ್ಟಿದ ಸಮಸ್ತವಾದ ಜೀವರಾಶಿಗಳನ್ನು ಪಾಲನೆ ಮಾಡುವವನು ಅನಿರುದ್ಧನು. ಶ್ರೀಹರಿಯ ನಾರಾಯಣಾದಿ ಪಂಚರೂಪಗಳ ಮಹಿಮೆಯು ಅತ್ಯದ್ಭುತವಾದದ್ದು. ಹರಿಯ ಈ ಬಗೆಯ ಮಹಿಮಾತಿಶಯವನ್ನು ಶ್ರೀವಾದಿರಾಜರ ವೈಕುಂಠವರ್ಣನೆಯ ಮೊದಲಾದ ಗ್ರಂಥಗಳಲ್ಲಿಯೂ ನೋಡಬಹುದು. ಈ ಚತುರರೂಪದ ಆಯಾ ವಿಶೇಷಗಳನ್ನು ಆಚಾರ್ಯ ತಮ್ಮ ತಾತ್ಪರ್ಯ ನಿರ್ಣಯ ಗ್ರಂಥಗಳಲ್ಲಿ ತಿಳಿಸಿದ್ದಾರೆ. ಹರಿಯು ಈ ಸೃಷ್ಟ್ಯಾದಿ ಸಮಸ್ತಕಾರ್ಯವನ್ನು ಒಂದೇ ರೂಪದಿಂದ ಮಾಡುವ ಶಕ್ತಿಯಿದ್ದರು ಆತನೇ ತನ್ನ ಸಂಕಲ್ಪನುಸಾರವಾಗಿ ಅನಂತವಾದ ಭಿನ್ನವಾದ ಯೋಗ್ಯತೆಯುಳ್ಳ ಅನಂತ ಜೀವರ ಉದ್ಧಾರಕ್ಕಾಗಿ ಶ್ರೀಹರಿಯು ಅನಂತ ರೂಪಿಯಾಗಿದ್ದಾನೆ.

ಜಯಾಪತಿಯಾದ ಸಂಕರ್ಷಣ ರೂಪಿಯಾದ ಹರಿಯು ಸಮಸ್ತವಾದ ಜೀವ ಜಾತಗಳ ಸಂಹರಿಸುವನಾಗಿ ಸಂಹಾರಕರ್ತ ಎನಿಸಿದ್ದಾನೆ. ವಿಶ್ವದಲ್ಲೆಲ್ಲಾ ತುಂಬಿರುವ ಹರಿಯ ರೂಪಗಳು ಮೂಲರೂಪದ ನಾರಾಯಣನಿಗಿಂತ ಅಭಿನ್ನವಾದವುಗಳಾಗಿವೆ. ಹರಿಯಲ್ಲಿರುವ ವಿಶೇಷ ಎಂಬ ಸ್ವರೂಪಭೂತ ಧರ್ಮದಿಂದಲೂ, ವ್ಯವಹರಿಸುತ್ತೇವೆ. ಹರಿಯ ಈ ಬಗೆಯ ಮಹಿಮೆಯನ್ನು ವೇದಾದಿಗಳಿಂದ ತಿಳಿಯಬಹುದೇ ವಿನಃ ಮನುಷ್ಯ ತನ್ನ ಬುದ್ಧಿಯಿಂದ ಗ್ರಹಿಸುವುದು ಅತ್ಯಂತ ಕಷ್ಟವೇ ಸರಿ.

೧೯. ತಥಾ ಸ್ವಸ್ವಸಮಗ್ರಯೋಗ್ಯತಾಭಿಜ್ಞ ಪರಮಾನುಗ್ರಹಶೀಲ ಭಗವತ್ಪ್ರೇರಿತ ಚತುರ್ಮುಖಾದಿ ಸದ್ಗುರೂಪದಿಷ್ಟ ಸ್ವಸ್ವಯೋಗ್ಯ-ಭಗವದ್ರೂಪಗುಣೋಪಾಸನಯಾ ಸಂಜಾತ ಸ್ವಸ್ವಯೋಗ್ಯ-ಭಗವದ್ರೂಪವಿಶೇಷದರ್ಶನಭೋಗಾಭ್ಯಾಂ ವಿನಷ್ಟಾನಿಷ್ಟಸಂಚಿತ ಪ್ರಾರಬ್ಧ ಲಕ್ಷಣಾಶೇಷಕರ್ಮಣಾಂ....

**ಪ್ರತಿಪದಾರ್ಥ** :- ತಥಾ–ಮತ್ತು ಸ್ವಸ್ವಮಗ್ರ–ಯೋಗ್ಯತಾಭಿಜ್ಞ–ಪ್ರತಿಯೊಬ್ಬ ಜೀವರ ಸಂಪೂರ್ಣ ಯೋಗ್ಯತೆಯನ್ನು ಚೆನ್ನಾಗಿ ತಿಳಿದವರೂ, ಪರಮಾನುಗ್ರಶೀಲ–ಶ್ರೇಷ್ಠ ಮಟ್ಟದ ಅನುಗ್ರಹವನ್ನು ಮಾಡುವ ಸ್ವಭಾವವುಳ್ಳವರು, ಭಗವತ್ಪ್ರೇರಿತ–ಶ್ರೀಹರಿಯಿಂದ ಪ್ರೇರಿತರಾಗಿ, ಚತುರ್ಮುಖಾದಿ ಸದ್ಗುರೂಪದಿಷ್ಟ–ಬ್ರಹ್ಮಾದಿ ಸದ್ಗುರುಗಳಿಂದ ಉಪದೇಶಿಸಲ್ಪಟ್ಟ, ಸ್ವಸ್ವಯೋಗ್ಯ ಭಗವದ್ರೂಪ ಗುಣೋಪಾಸನೆಯಾ–ತಮಗೆ ಯೋಗ್ಯವಾದ ಭಗವಂತನ ರೂಪಗುಣಾದಿಗಳ ಉಪಾಸನೆಯಿಂದ, ಸಂಜಾತ–ಉಂಟಾದ, ಸ್ವಸ್ವಯೋಗ್ಯ ಭಗವದ್ರೂಪ ವಿಶೇಷ ದರ್ಶನಾಭೋಗಾಭ್ಯಾಂ–ತಮಗೆ ಯೋಗ್ಯವಾದ ಭಗವದ್ರೂಪದ ಅಪರೋಕ್ಷ-ದರ್ಶನದಿಂದಲೂ, ಪ್ರಾರಬ್ಧಕರ್ಮದ ಭೋಗದಿಂದಲೂ, ವಿನಿಷ್ಟಾನಿಷ್ಟ ಸಂಚಿತ ಪ್ರಾರಬ್ಧ ಲಕ್ಷಣಾ ಶೇಷಕರ್ಮಣಾಂ–ನಷ್ಟವಾದ ನಾಶ ಹೊಂದಿದ ಸಕಲ ಅನಿಷ್ಟ ಕರ್ಮ ಮತ್ತು ಪ್ರಾರಬ್ಧ ಕರ್ಮವುಳ್ಳವರಾದ,

**ತಾತ್ಪರ್ಯ** :- ನಿಯತ ಗುರುಗಳು ನಮಗೆ ಆತ್ಮೋದ್ಧಾರಕರಾಗಿರುತ್ತಾರೆ. ತಾರತಮ್ಯಕ್ರಮದಲ್ಲಿ ಮೇಲಿನ ಜೀವರು ಕೆಳಗಿನವರಿಗೆ ನಿಯತ ಗುರುಗಳಾಗಿರುತ್ತಾರೆ. ಜೀವರಿಗೆ ನಿಯತಗುರುಗಳು ಸಾಧನಾ ಪರಿಪಕ್ವತೆಯ ಕಾಲದಲ್ಲಿ ಹರಿಯ ಪ್ರೇರಣೆಯಿಂದಲೇ ದೊರೆಯುತ್ತಾರೆ. ಹಾಗೆ ದೊರೆತ ಗುರುಗಳು ಏಕಾಂತದಲ್ಲಿ ಶಿಷ್ಯನಿಗೆ ಬಿಂಬರೂಪವನ್ನು ತಿಳಿಸಿಕೊಡುತ್ತಾರೆ.

ಆಗ ಶಿಷ್ಯನಾದವನು ಬಿಂಬೋಪಾಸನೆಯಲ್ಲಿ ತೊಡಗಿಕೊಳ್ಳುತ್ತಾನೆ. ಹೀಗೆ ಬಿಂಬೋಪಾಸನೆಯನ್ನು ಆರಂಭಿಸಿದ ಜೀವನಿಗೆ ಶ್ರೀಹರಿಯ ನಿಯತಕಾಲದಲ್ಲಿ ತಾನು ಸಂಕಲ್ಪಿಸಿದ ಕಾಲದಲ್ಲಿ ತನ್ನ ದರ್ಶನವನ್ನು ಕೊಟ್ಟು ಅನುಗ್ರಹಿಸುತ್ತಾನೆ.

ಹೀಗೆ ಗುರುವು ಶಿಷ್ಯನ ಯೋಗ್ಯತೆಯನ್ನು ಪರಿಪೂರ್ಣವಾಗಿ ತಿಳಿದು ಅವನನ್ನು ಪರಮಾನುಗ್ರಹನನ್ನಾಗಿಸಿ ಉದ್ಧರಿಸಬೇಕು ಎನ್ನುವ ಮನಸ್ಸುಳ್ಳವನಾಗಿರುತ್ತಾನೆ. ಹಾಗೆ ಅನುಗ್ರಹಿಸುವಾಗ ಶಿಷ್ಯನಾದವನು ಯಾವ ಹರಿಯರೂಪವನ್ನು ಎಷ್ಟುಗುಣಗಳಿಂದ ಚಿಂತಿಸಬೇಕೆಂಬುದನ್ನು ತಿಳಿಸಿ ಉಪದೇಶಿಸುತ್ತಾನೆ. ಹೀಗೆ ಚತುರ್ಮುಖ ಪರ್ಯಂತರವಾಗಿ ಸದ್ಗುರುಗಳ ಸಮೂಹದಲ್ಲಿ ಪ್ರತಿಜೀವನಿಗೂ ಯೋಗ್ಯವಾದ ಗುರುಗಳು ಪರಿಪಕ್ವತೆಯ ಕಾಲದಲ್ಲಿ ಲಭಿಸುತ್ತಾನೆ. ಗುರುವಿನ ಅನುಗ್ರಹ ಪಡೆದ ಜೀವ ಹರಿಸಂಕಲ್ಪಿತ ಕಾಲದಲ್ಲಿ ಭಗವಂತನ ಅಪರೋಕ್ಷವನ್ನು ಹೊಂದುತ್ತಾನೆ.

ಹೀಗೆ ಅಪರೋಕ್ಷದಿಂದ ಜೀವನಿಗಾಗುವ ಮುಖ್ಯಫಲವನ್ನು ಬ್ರಹ್ಮಸೂತ್ರಾದಿಗಳಲ್ಲಿ ತಿಳಿಸುತ್ತ ಜೀವನ ಕರ್ಮಕ್ಷಯವಾಗಲು ಆರಂಭವಾಗುತ್ತದೆ. ಅಪರೋಕ್ಷ ಆಗುವ ಕಾಲಕ್ಕೆ ಕರ್ಮವು ಫಲವನ್ನು ಕೊಡಲು ಆರಂಭಿಸುತ್ತದೆ. ಪ್ರಾರಬ್ಧವನ್ನು ಸರ್ವರು ಅನುಭವಿಸಿಯೇ ಕಳೆದುಕೊಳ್ಳಬೇಕು. ಆದರೆ ಶ್ರೀಹರಿಯ ವಿಶೇಷ ಅನುಗ್ರಹ ಬಲದಿಂದ ಕರ್ಮದ ಬಹುಭಾಗ ಉಪಮರ್ದನವಾಗುವ ಸಾಧ್ಯತೆಗಳಿವೆ. ಅಂತಹ ಪ್ರಾರಬ್ಧವು ಪುಣ್ಯ ಪ್ರಾರಬ್ಧವು ಇರಬಹುದು, ಅಥವಾ ಪಾಪದ ಪ್ರಾರಬ್ಧವು ಇರಬಹುದು. ಬ್ರಹ್ಮಾದಿ ಋಜು ಜೀವರಲ್ಲಿ ಪುಣ್ಯದ ಪ್ರಾರಬ್ಧವು ಮಾತ್ರ ಇರುವುದು. ಅಂತಹ ಪುಣ್ಯಪ್ರಾರಬ್ಧವು ಸುಖದ ಭಾಗಕ್ಕೆ ಕಾರಣವಾಗುತ್ತದೆ. ರುದ್ರಾದಿ ಜೀವರ ಪ್ರಾರಬ್ಧವು ಸ್ವಲ್ಪ ದುಃಖಕ್ಕೂ ಕಾರಣವಾಗಬಹುದು. ಹಾಗೂ ಸುಖ ಪ್ರಾಚುರ್ಯದಿಂದ ಕೂಡಿದೆ. ತಾರತಮ್ಯಾನುಸಾರ ಜೀವನಿಗೆ ಪ್ರಾರಬ್ಧದಲ್ಲಿ ದುಃಖ ಪ್ರಾಚುರ್ಯವೇ ಹೆಚ್ಚಾಗಿರುತ್ತದೆ. ದುಃಖಾನುಭವ ಕಾಲವು ಕಾಲಾಂತರದಲ್ಲಿ ಕಡಿಮೆಯಾಗುತ್ತದೆ. ಪ್ರಾರಬ್ಧರೂಪ ಭಾಗವು ಕೊನೆಗೊಳ್ಳುವ ಕಾಲಕ್ಕೆ ಜೀವನಿಗೆ ಇರುವ ದೇಹವನ್ನು ಚರಮದೇಹವೆಂದು ಕರೆಯುತ್ತಾರೆ. ಪ್ರಾರಬ್ಧವು ಅತಿಕಡಿಮೆ ಇದ್ದು ಅಪರೋಕ್ಷವಾದ ದೇಹದಲ್ಲಿಯೇ ಭೋಗ ಮುಗಿಯುವಂತಿದ್ದರೆ ಆ ಜೀವನು ದೇಹ ಪಾತವಾದ ನಂತರ ಮುಕ್ತನಾಗುತ್ತಾನೆ. ಅಥವಾ ಪ್ರಾರಬ್ಧವು ಹೆಚ್ಚಿದ್ದರೆ

ಅನೇಕ ಜನ್ಮಗಳನ್ನು ಎತ್ತಿ ಮಹಾಪ್ರಳಯದವರೆವಿಗೂ ಇರಬೇಕಾಗುತ್ತದೆ. ಕಡೆಯಲ್ಲಿ ಬ್ರಹ್ಮನ ಬಳಿಗೆ ಬಂದು ಆತನಿಂದ ಉಪದೇಶವನ್ನು ಹೊಂದಿ ಸ್ಪಷ್ಟತರವಾದ ಅಪರೋಕ್ಷವನ್ನು ಹೊಂದಿ ಬ್ರಹ್ಮನೊಂದಿಗೆ ವಿರಜಾನದಿಯಲ್ಲಿ ಸ್ನಾನಮಾಡಿ ಲಿಂಗದೇಹವನ್ನು ಬಿಟ್ಟು ಬ್ರಹ್ಮದೇವರೊಂದಿಗೆ ಶ್ರೀಹರಿಯ ಉದರವನ್ನು ಪ್ರವೇಶಿಸುತ್ತಾನೆ. ಚರಮದೇಹ ನಾಶವಾದಮೇಲೂ ಉಳಿದಿರುವ ಶೇಷ ಪ್ರಾರಬ್ಧವು ವಿರಜಾನದಿ ಸ್ನಾನದಿಂದ ಕಳೆದುಕೊಂಡ ಜೀವನು ಕೇವಲ ಸ್ವರೂಪದೇಹದಿಂದ ಉಳಿಯುತ್ತಾನೆ. ಅದನ್ನೇ ಶ್ರೀರಾಘವೇಂದ್ರ ಸ್ವಾಮಿಗಳವರು ತಿಳಿಸುತ್ತಾ **ವಿನಷ್ಟಾನಿಷ್ಟ ಸಂಚಿತ "ಪ್ರಾರಬ್ಧ ಲಕ್ಷಣಶೇಷ ಕರ್ಮಣಾಂ"** ಎಂದಿದ್ದಾರೆ.

**೨೦. ಸ್ವಸ್ವಯೋಗ್ಯತಾನುಸಾರೇಣ ಸಂಪೂರ್ಣಸಾಧನಾನಾಂ ಪೂರ್ವ-ಕಲ್ಪೇ ಬ್ರಹ್ಮಣಾ ಸಹ ವಿರಜಾನದೀಸ್ನಾನೇನ ತ್ಯಕ್ತಲಿಂಗಾನಾಂ ತಥಾ ವಿನಷ್ಟಾವಶಿಷ್ಟೇಷ್ಟಾಶೇಷಪ್ರಾರಬ್ಧಕರ್ಮಣಾಂ ಪ್ರಲಯಕಾಲೇ ಭಗವದುದರೇ ವಸತಾಂ.....**

**ಪ್ರತಿಪದಾರ್ಥ :-** ಸ್ವಸ್ವಯೋಗ್ಯತಾನುಸಾರೇಣ–ತಮ್ಮ ಯೋಗ್ಯತಾನು-ಸಾರವಾಗಿ, ಸಂಪೂರ್ಣ ಸಾದನಾನಾಂ–ಪೂರ್ಣ ಸಾಧನೆ ಮಾಡಿದವರೂ, ಪೂರ್ವಕಲ್ಪೇ–ಹಿಂದಿನ ಬ್ರಹ್ಮಕಲ್ಪದಲ್ಲಿ, ಬ್ರಹ್ಮಣಾಸಹ–ಬ್ರಹ್ಮದೇವರಿಂದ ಕೂಡಿಕೊಂಡು, ವಿರಜಾನದೀ ಸ್ನಾನೇನ– ವಿರಜಾನದಿಯ ಸ್ನಾನದಿಂದಾಗಿ, ತ್ಯಕ್ತಲಿಂಗಾನಾಂ–ಬಿಡಲ್ಪಟ್ಟ ಲಿಂಗಶರೀರವುಳ್ಳವರೂ, ತಥಾ–ಹಾಗೆಯೇ, ವಿನಷ್ಟಾ–ಕಳೆದುಕೊಂಡ, ಅವಶಿಷ್ಟ–ಉಳಿದಿರುವ, ಇಷ್ಟಾಶೇಷ ಪ್ರಾರಬ್ಧಕರ್ಮಣಾಂ–ಅನಾರಬ್ಧ ಇಷ್ಟಪುಣ್ಯ ಹಾಗೂ ಸಕಲ ಪ್ರಾರಬ್ಧಕರ್ಮವುಳ್ಳವರೂ, ಪ್ರಳಯಕಾಲೆ–ಪ್ರಳಯಕಾಲದಲ್ಲಿ, ಭಗವದುದರೆ ವಸತಾಂ–ಹರಿಯ ಉದರದಲ್ಲಿ ವಾಸಮಾಡುವವರಾದ,

**ತಾತ್ಪರ್ಯ :-** ವೈಕುಂಠವು ಮೂರು ಭಾಗದಿಂದ ಕೂಡಿದೆ. ಅದನ್ನು ಶ್ರೀ–ಭೂ–ದುರ್ಗಾ ಎಂಬುದಾಗಿಯೂ ಕರೆಯುತ್ತಾರೆ. ಶ್ರೀ ಭಾಗವನ್ನು

ಶ್ರೀದೇವಿಯು ನಿಯಮನ ಮಾಡಿದರೆ ಉಳಿದೆರಡು ಭಾಗಗಳನ್ನು ಭೂ ಹಾಗೂ ದುರ್ಗಾದೇವಿಯರು ನಿಯಮನ ಮಾಡುತ್ತಾರೆ. ಈ ಮೂರು ಭಾಗಗಳಲ್ಲಿ ಶ್ರೀ ಭಾಗವು ಅಪ್ರಾಕೃತವಾಗಿದೆ. ಅಂತಹ ಶ್ರೀಭಾಗದಲ್ಲಿ ಹರಿಯು ವೈಕುಂಠನೆಂಬ ಹೆಸರಿನಿಂದ ಶ್ರೀದೇವಿಯೊಡನೆ ವಿಹಾರ ಮಾಡುವನು. ಶ್ರೀಭಾಗ ಹಾಗೂ ವೈಕುಂಠನ ನಡುವೆ ಶ್ರೀದೇವಿಯು ವಿರಜಾನದಿಯಾಗಿ ಸುತ್ತುವರೆದಿದ್ದಾಳೆ. ಪ್ರಳಯಕಾಲದಲ್ಲಿ ಬ್ರಹ್ಮಾಂಡವು ಲಯವನ್ನು ಹೊಂದಿ ಬ್ರಹ್ಮಾಂಡದ ಹೊರಗಿನ ಆವರಣವು ಲಯ ಹೊಂದುತ್ತಿರಲು ಸೂಕ್ಷ್ಮಸೃಷ್ಟಿಯಲ್ಲಿ ಸೃಜ್ಯರಾದ ತತ್ವಾಭಿಮಾನಿಗಳು ತಮಗಿಂತ ಉತ್ತಮರಾದ ದೇವತೆಗಳಲ್ಲಿ ಲಯ ಹೊಂದುತ್ತಿರುವಾಗ ಆಗ ಚತುರ್ಮುಖನಲ್ಲಿ ಪ್ರವೇಶಿಸಿದ್ದ ಎಲ್ಲಾ ಜೀವರು ಹೊರಬಂದು ವಿರಜಾ ನದಿಯಲ್ಲಿ ಸ್ನಾನ ಮಾಡಿ ಲಿಂಗದೇಹವನ್ನು ತ್ಯಜಿಸುತ್ತಾರೆ.

ಈ ಲಿಂಗದೇಹವು ಜೀವನ ಸ್ವರೂಪವೇ ಆಗಿದೆ ಹಾಗೂ ವಿಕಾರ ರಹಿತವಾಗಿದೆ. ಮುಕ್ತರಾಗುವ ಪರ್ಯಂತವು ಎಲ್ಲರೂ ಲಿಂಗಾಂಗಿಗಳೇ ಆಗಿದ್ದಾರೆ. ಲಿಂಗದೇಹವು ಸೂಕ್ಷ್ಮಪಂಚ ಭೂತಗಳೆಂಬ ಪಂಚ ತನ್ಮಾತ್ರೆಗಳು, ದಶೇಂದ್ರಿಯಗಳು ಹಾಗೂ ಮನಸ್ಸು ಒಟ್ಟು೧೬ ಸೂಕ್ಷ್ಮ ಕಲೆಗಳಿಂದ ಕೂಡಿದೆ. ಪ್ರೇರಕ ಚೇತನ ಇಲ್ಲದೆ ಚಲಿಸದ ಜಡವಸ್ತು ಅಡಗಿವೆ. ಇವುಗಳಿಗೆ ಸ್ವತಃ ಬಂಧಕಶಕ್ತಿ ಇಲ್ಲ, ಅಂದರೆ ಜೀವನಿಗೆ ಶ್ರೀಹರಿಯೇ ಬಂಧಕನು, ಶ್ರೀಹರಿಯೇ ಮೋಚಕನೂ ಆಗಿದ್ದಾನೆ.

ಶ್ರೀಹರಿಯ ಇಚ್ಛೆಯಿಂದ ತ್ರಿಗುಣಾಭಿಮಾನಿಯಾದ ಲಕ್ಷ್ಮಿಯೇ ಮುಖ್ಯಬಂಧಪ್ರದಳಾಗಿದ್ದಾಳೆ. ಲಕ್ಷ್ಮಿಯ ನಂತರ ಭಾರತೀ, ಸರಸ್ವತಿಯರು ಅವರ ನಂತರದಲ್ಲಿ ಸೌಪರ್ಣಿ ವಾರುಣಿ ಉಮಾದೇವಿಯರು ಇವರು ಕೂಡ ಪ್ರಕೃತಿಶಬ್ದವಾಚ್ಯರಾಗಿ ಪ್ರಕೃತಿ ಅಭಿಮಾನಿ ಆಗಿ ಜೀವರನ್ನು ತ್ರಿಗುಣಗಳಿಂದ ಬಂಧಿಸುತ್ತಾರೆ. ಲಿಂಗದೇಹದಿಂದ ಮುಕ್ತವಾದ ಜೀವ ಪೊರೆ ಕಳಚಿದ ಹಾವಿನಂತೆ ಶುದ್ಧ ಸ್ವಭಾವ ಉಳ್ಳದ್ದಾಗಿರುತ್ತದೆ. ಇಂತಹ ಸ್ವರೂಪ ಜೀವವು ನಾನಾ

ಆಕಾರಗಳಿಂದ ಕೂಡಿದೆ. ಹಾಗೂ ವಿಕಾರರಹಿತವಾಗಿದೆ. ಹೀಗೆ ಲಿಂಗದೇಹವನ್ನು ತ್ಯಾಗಮಾಡಿ ನಾಶವಾಗದೆ ಉಳಿದಿರುವ ಆರಂಭಿಸದ ಇಷ್ಟಪುಣ್ಯ ಹಾಗೂ ಸಕಲಪ್ರಾರಬ್ಧಕರ್ಮ ಉಳ್ಳವರು ಆದ ಜೀವರು ಪ್ರಳಯಕಾಲದಲ್ಲಿ ಹರಿಯ ಉದರದಲ್ಲಿ ವಾಸ ಮಾಡುತ್ತಾರೆ.

**೨೧. ಆನಂದಮಾತ್ರವಪುಷಾಂ ತದನುಭವರಹಿತಾನಾಂ ಸ್ವಸ್ವಯೋಗ್ಯ ಭಗವದ್ರೂಪವಿಶೇಷಧ್ಯಾನರತಾನಾಂ ಸೃಷ್ಟಿಕಾಲೇ ಭಗವದಾಜ್ಞಯಾ ಭಗವದುದರಾದ್ಬಹಿರ್ಗತಾನಾಂ ಶ್ರೀ ಶ್ವೇತದ್ವೀಪದರ್ಶನಂ ನಿಮಿತ್ತೀಕೃತ್ಯ ಪ್ರಧಾನಾವರಣಭೂತ ಸ್ವೇಚ್ಛಾಪಸರಣೇನ ಸ್ವಸ್ವಯೋಗ್ಯಾನಂದಾವಿರ್ಭಾವಲಕ್ಷಣ ಮುಕ್ತಿಪ್ರದಾನಪ್ರಯೋಜಕ ಮಾಯಾಪತಿ ಶ್ರೀ ವಾಸುದೇವಾತ್ಮಕ.....**

ಪ್ರತಿಪದಾರ್ಥ :- ಆನಂದ ಮಾತ್ರ ವಪುಷಾಂ–ಆನಂದವೇ ದೇಹವಾಗಿ ಉಳ್ಳವರಾದ, ತದನುಭವ ರಹಿತಾನಾಂ–ಆದರೆ ಆ ದೇಹದ ಪೂರ್ಣಾನುಭವ ಇಲ್ಲದವರಾದ ಸ್ವಸ್ವಯೋಗ್ಯ ಭಗವದ್ರೂಪ ವಿಶೇಷಧ್ಯಾನರತಾನಾಂ–ತಮಗೆ ಯೋಗ್ಯವಾದ ಹರಿಯ ಧ್ಯಾನ(ಚಿಂತನೆ)ಯಲ್ಲಿ ರತರಾದ, ಸೃಷ್ಟಿಕಾಲೇ–ಸೃಷ್ಟಿಯ ಆರಂಭಕಾಲದಲ್ಲಿ, ಭಗವದಾಜ್ಞಯಾ–ಶ್ರೀಹರಿಯ ಅಪ್ಪಣೆಯಿಂದ, ಭಗವದುದರಾತ್–ಹರಿಯ ಉದರದಿಂದ, ಬಹಿರ್ಗತಾನಾಂ–ಹೊರ ಬಂದವರಾದ, ಶ್ರೀ ಶ್ವೇತದ್ವೀಪದರ್ಶನಂ– ಮುಕ್ತಿಗಮ್ಯವಾದ ಶ್ವೇತದ್ವೀಪ ದರ್ಶನವನ್ನು, ನಿಮಿತ್ತೀಕೃತ್ಯ–ನಿಮಿತ್ತ ಮಾಡಿಕೊಂಡು, ಪ್ರಧಾನಾವರಣಭೂತ–ಆನಂದದ ಅಭಿವ್ಯಕ್ತಿಗೆ ಕಾರಣವಾದ ಜೀವಸ್ವರೂಪದ ಮುಖ್ಯಾವರಣಭೂತವಾದ, ಸ್ವೇಚ್ಛಾಪಸರಣೇನ–ತನ್ನ ಇಚ್ಛಾರೂಪವಾದ ಆವರಣವನ್ನು ದೂರ ಸರಿಸಿ, ಸ್ವಸ್ವಯೋಗ್ಯಾನಂದಾ-ವಿರ್ಭಾವಲಕ್ಷಣ–ಜೀವರ ಸ್ವರೂಪಭೂತವಾದ ಪೂರ್ಣಾನಂದವನ್ನು ಪ್ರಕಟಗೊಳಿಸುವುದೆಂಬ, ಮುಕ್ತಿಪ್ರಯೋಜನಂ–ಮುಕ್ತಿಪ್ರಧಾನವೇ ಪ್ರಯೋಜನವಾಗಿ ಇರುವ, ಮಾಯಾಪತಿ ವಾಸುದೇವಾತ್ಮಕ–ಮಾಯಾ ರೂಪದ ಲಕ್ಷ್ಮೀದೇವಿಯ ರಮಣನಾದ ವಾಸುದೇವ ಸ್ವರೂಪದ,

**ತಾತ್ಪರ್ಯ :-** ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಆಚಾರ್ಯರು ಅಪ್ಪಣೆ ಕೊಡಿಸಿರುವ "**ದೃಷ್ಟಾ ಸ ಮುಕ್ತಾನಃ**" ಎಂಬ ವಿಷಯವನ್ನು ಶ್ರೀಮಂತ್ರಾಲಯ ಮಹಾಪ್ರಭುಗಳು ಇಲ್ಲಿ ವಿವರಿಸಿದ್ದಾರೆ. ಮಹಾಪ್ರಳಯ ಕಾಲದಲ್ಲಿ ಹರಿಯ ಉದರಭಾಗವನ್ನು ಪ್ರವೇಶಿಸಿದ ಜೀವರು ಸೃಷ್ಟಿಕಾಲದ ಪರ್ಯಂತವಾಗಿ ಧ್ಯಾನಾವಸ್ಥೆಯಲ್ಲಿರುವರು. ಆಗ ಅವರಿಗೆ ಲಿಂಗದೇಹ-ವಿರುವುದಿಲ್ಲಾ. ಕೇವಲ ಸ್ವರೂಪಾನಂದ ದೇಹಿಗಳಾಗಿರುತ್ತಾರೆ. ಆದರೆ ಅದರ ಆನಂದವು ಪೂರ್ಣವಾಗಿರುವುದಿಲ್ಲ. ಹರಿಯ ಉದರಗತರಾದ ಈ ಬಗೆಯ ಜೀವರು ಸೃಷ್ಟಿಯ ಕಾಲದ ವರೆವಿಗೂ ಅವರವರ ಯೋಗ್ಯತಾನುಸಾರದ ಸ್ವಬಿಂಬ ಧ್ಯಾನದಲ್ಲಿ ತೊಡಗಿರುತ್ತಾರೆ. ಅಂತಹ ಜೀವರು ಸೃಷ್ಟಿಯ ಕಾಲದಲ್ಲಿ ಹರಿಯ ಆಜ್ಞೆಯಿಂದ ಹೊರಬರುತ್ತಾರೆ. ಅವರನ್ನು ಮಾಯಾಪತಿಯಾದ ವಾಸುದೇವನು ಶ್ವೇತದ್ವೀಪದರ್ಶನ ಮಾಡಿಸಲು ಕರೆದುಕೊಂಡು ಹೋಗುತ್ತಾನೆ. ಅಲ್ಲಿ ತನ್ನದೇ ಆದ ಪದ್ಮನಾಭರೂಪದ ದರ್ಶನವನ್ನು ಕೊಡುತ್ತಾನೆ. ದರ್ಶನದಿಂದ ತನ್ನ ಇಚ್ಛಾರೂಪದ ಆವರಣವನ್ನು ಸರಿಸಿ ಅವರನ್ನು ಮುಕ್ತರೆನಿಸಿ ಪೂರ್ಣಾನಂದ-ರನ್ನಾಗಿ ಮಾಡುತ್ತಾನೆ. ಈ ವ್ಯಾಪಾರದ ಪ್ರಧಾನ ಕರ್ತೃ ಮುಕ್ತಿಪ್ರದನಾದ ಮಾಯಾಪತಿ ಶ್ರೀವಾಸುದೇವನಾಗಿದ್ದಾನೆ.

ಪ್ರಧಾನಾವರಣಭೂತ ಸ್ವೇಚ್ಛಾಪಸರಣೇನ ಎಂಬಲ್ಲಿ ಜೀವನನ್ನು ಆವರಿಸಿರುವ ಆವರಣಗಳಲ್ಲಿ ಪ್ರಧಾನವಾದದ್ದು ಈಶ್ವರೇಚ್ಛಾ ಎನ್ನುವ ಆವರಣವಾಗಿದೆ. ಅದು ಹರಿಯ ಅನುಗ್ರಹರೂಪದಿಂದಲೇ ಪರಿಹಾರ-ವಾಗಬೇಕು. ಅದು ಶ್ವೇತದ್ವೀಪದಲ್ಲಿರುವ ಹರಿಯ ಪದ್ಮನಾಭರೂಪವನ್ನು ನೋಡುವ ತನಕವೂ ಆಗಲಾರದು. ಈ ಆವರಣವು ಅಪಸರಣವಾದಾಗ ಜೀವನು ಪೂರ್ಣಾನಂದನಾಗುತ್ತಾನೆ. ಈ ವ್ಯಾವಹಾರವನ್ನು ಪ್ರಧಾನವಾಗಿ ಮಾಯಾಪತಿ ವಾಸುದೇವನು ಮಾಡುತ್ತಾನೆ.

೨೨. ಲಕ್ಷ್ಮ್ಯಾತ್ಮಕ ಪ್ರಳಯಾಬ್ಧಿಸ್ಥ ಶ್ರೀವಟಪತ್ರಶೇಷಶಾಯ್ಯಶೇಷ-ಜಗದುದರಾಶೇಷಮುಕ್ತನಾಭಿದೇಶೋರ್ಧ್ವಭಾಗಕುಕ್ಷ್ಯಾಖ್ಯದೇಶ ತ್ರಿವಿಧಾಶೇಷಸಂಸಾರಿನಾಭಿದೇಶಾಖಿಲತಮಃಪತಿತ ನಾಭ್ಯ-ಧೋಭಾಗದೇಶ ಶ್ರೀಭೂಮ್ಯಾಲಿಂಗಿತ ಕಾಲಾದಿಚೇಷ್ಟಕ ಪರಮಾ-ಣ್ವಾದ್ಯಶೇಷ ಕಾಲಾವಯವ ಸೃಷ್ಟ್ಯಾದಿಕರ್ತೃ ಶೇಷನಾಮಕ ಪರಮಪುರುಷನಾಮಕ ಶ್ರೀ ಚತುರ್ಮುಖ ಮುಖ್ಯಪ್ರಾಣೋ-ಪಾಸಿತಚರಣಾನಿರುದ್ಧಾದಿ ಚತೂರೂಪಾತ್ಮ ಗಾಯತ್ರೀನಾಮಕ ಸವಿತೃನಾಮಕ ರೂಪವಿಶೇಷಾತ್ಮಕ ವ್ಯಾಪ್ತರೂಪ ಬೃಹಚ್ಛರೀರ....

ಪ್ರತಿಪದಾರ್ಥ :- ಲಕ್ಷ್ಮ್ಯಾತ್ಮಕ–ಲಕ್ಷ್ಮೀದೇವಿಯ ಸ್ವರೂಪವೇ ಆದ, ಪ್ರಳಯಾಬ್ಧಿಸ್ಥ– ಪ್ರಳಯಸಮುದ್ರದಲ್ಲಿರುವ, ಶ್ರೀವಟಪತ್ರಶೇಷಶಾಯಿ– ಶ್ರೀರೂಪದ ವಟಪತ್ರವೇ ಶೇಷನಂತಿರುವ ಹಾಸಿಗೆಯಲ್ಲಿ ಮಲಗಿರುವ, ಅಶೇಷ ಜಗದುದರ–ಸಕಲ ಜಗತ್ತನ್ನು ತನ್ನ ಹೊಟ್ಟೆಯಲ್ಲಿ ಧರಿಸಿರುವ, ಅಶೇಷ ಮುಕ್ತನಾಭಿದೇಶೇ ಊರ್ಧ್ವಭಾಗ ಕುಕ್ಷ್ಯಾಖ್ಯದೇಶ– ಸಕಲ ಮುಕ್ತ ಜೀವರನ್ನು ಧರಿಸಿರುವ ನಾಭಿಯ ಮೇಲಿರುವ ಕುಕ್ಷಿ ಎಂಬ ದೇಹಭಾಗವುಳ್ಳ, ತ್ರಿವಿಧ ಅಶೇಷ ಸಂಸಾರಿ ನಾಭಿದೇಶ–ಮೂರು ವಿಧದ ಸಕಲ ಸಂಸಾರಿ ಜೀವರಾಶಿಗಳನ್ನು ಧರಿಸಿದ , ನಾಭಿದೇಶವುಳ್ಳ, ಅಖಿಲತಮಃ ಪತಿತನಾಭ್ಯಧೋ ಭಾಗದೇಶ–ತಮಸ್ಸಿನಲ್ಲಿ ಬಿದ್ದಿರುವ ಸಕಲ ಜೀವರಾಶಿಗಳನ್ನು ಧರಿಸಿರುವ ನಾಭಿಯ ಕೆಳಪ್ರದೇಶವುಳ್ಳ, ಶ್ರೀಭೂಮ್ಯಾಲಿಂಗಿತ – ಶ್ರೀ ಭೂಮಿದೇವಿಯ ರಿಂದ ಆಲಿಂಗಿತನಾದ, ಕಾಲಾದಿಚೇಷ್ಟಕ–ಕಾಲವೇ ಮೊದಲಾದವುಗಳ ನಿಯಾಮಕನೂ, ಪರಮಾಣ್ವಾದ್ಯಶೇಷ ಕಾಲಾವಯವ – ಪರಮಾಣುವೇ ಮೊದಲಾದ ಸಮಸ್ತಕಾಲ ವಿಭಾಗಗಳ, ಸೃಷ್ಟ್ಯಾದಿಕರ್ತೃ – ಸೃಷ್ಟ್ಯಾದಿಕರ್ತನಾದ, ಶೇಷನಾಮಕ–ಶೇಷನೆಂದು ಕರೆಯಲ್ಪಡುವ, ಪರಮ ಪುರುಷನಾಮಕ–ಪುರುಷೋತ್ತಮನೆಂದು ಕರೆಯುವ ಶ್ರೀಚತುರ್ಮುಖ ಮುಖ್ಯಪ್ರಾಣೋಪಾಸಿತ ಚರಣ – ಶ್ರೀಚತುರ್ಮುಖ ಬ್ರಹ್ಮದೇವರು ಹಾಗೂ ಮುಖ್ಯಪ್ರಾಣದೇವರಿಂದ ಉಪಾಸಿಸಲ್ಪಡುವ ದಿವ್ಯವಾದ ಪಾದವುಳ್ಳ, ಅನಿರುದ್ಧಾದಿ ಚತುರೂಪಾತ್ಮಕ–ಅನಿರುದ್ಧನೇ ಮೊದಲಾದ ಶ್ರೀಹರಿ ನಾಲ್ಕು ರೂಪಗಳುಳ್ಳ, ಗಾಯತ್ರೀ

ನಾಮಕ–ಗಾಯತ್ರಿ ಎಂಬ ಹೆಸರುಳ್ಳ, ಸವಿತೃನಾಮಕ–ಸವಿತೃ ಎಂಬ ರೂಪ ವಿಶೇಷಾತ್ಮಕ–ರೂಪವಿಶೇಷವುಳ್ಳ, ವ್ಯಾಪ್ತರೂಪ ಬೃಹಚ್ಛರೀರ–ವ್ಯಾಪಕವಾದ ಹಾಗೂ ಗುಣಪೂರ್ಣನಾದ ಶರೀರವುಳ್ಳವನಾದ,

**ತಾತ್ಪರ್ಯ :-** ಪ್ರಳಯ ಕಾಲದಲ್ಲಿ ಲಕ್ಷ್ಮಿಯು ಗಾಳಿ-ನೀರು ಪದ್ಮ ಮೊದಲಾಗಿ ಎಲ್ಲವೂ ತಾನೇ ಆಗಿರುತ್ತಾಳೆ. ಪ್ರಳಯಪೂರ್ಣವಾಗುವ ತನಕ ಶ್ರೀಮಹಾಲಕ್ಷ್ಮಿಯ ಈ ಎಲ್ಲಾ ರೂಪಗಳಿಂದ ತಾನೇ ಇದ್ದು ಶ್ರೀಹರಿಯ ಸೇವೆ ಮಾಡುವ ಮಹಾಭಾಗ್ಯವಂತೆಯಾಗಿದ್ದಾಳೆ. **"ಲಕ್ಷ್ಮೀರ್ಮೋದಕ ರೂಪೇಣ ಶಯ್ಯಾ ರೂಪೇಣ ಚಾಂಡಜ । ಆಸೀದ್ಗಭೋದಕೇ ಚೇತ್ಥಂ ನಾನ್ಯದಾ-ಸೀತ್ಕಥಂಚನ"** ಎಂದು ಸಿರಿದೇವಿಯ ಮಹಾಮಹಿಮೆಯನ್ನು ಪುರಾಣವಚನವು ಧೃಢೀಕರಿಸುತ್ತದೆ. ಪ್ರಳಯಕಾಲದಲ್ಲಿ ಆಕೆಯೇ ಎಲ್ಲಾ ರೂಪದಿಂದಿದ್ದಳು. ಬೇರಾರೂ ಇರಲಿಲ್ಲ ಎಂದು ಪುರಾಣಗಳು ವರ್ಣಿಸಿವೆ. ಆ ವಿಷಯವನ್ನು ಶ್ರೀರಾಘವೇಂದ್ರಸ್ವಾಮಿಗಳು ವರ್ಣಿಸುತ್ತ ಶ್ರೀಹರಿಯು ಪ್ರಳಯಕಾಲದಲ್ಲಿ ಸಮಸ್ತವಾದ ಚೇತನಾಚೇತನ ಪ್ರಪಂಚವನ್ನು ತನ್ನ ಹೊಟ್ಟೆಯಲ್ಲಿಟ್ಟು ಮೂಲರೂಪದ ನಾರಾಯಣನು ಪ್ರಳಯಾದಕದಲ್ಲಿನ ವಟಪತ್ರದಲ್ಲಿ ಪವಡಿಸುತ್ತಾನೆ. ಆದರೆ ಆಗ ಪ್ರಾಕೃತವಾದ ಯಾವುದೇ ಅಂದರೆ ಜಲವಾಗಲೀ ವಟಪತ್ರವಾಗಲಿ ಇರುವುದಿಲ್ಲ, ಬದಲಾಗಿ ಶ್ರೀಲಕ್ಷ್ಮಿಯೇ ಈ ಎಲ್ಲಾ ರೂಪದಿಂದ ಹರಿಯ ಸೇವೆ ಮಾಡುತ್ತಾಳೆ. ಹೀಗೆ ಮಲಗಿದ ನಾರಾಯಣ ತನಗಾಗಿ ನಿದ್ದೆ ಮಾಡುವವನಲ್ಲಾ ಎಂಬುದನ್ನು ತಿಳಿಸುತ್ತಾ **"ಸ್ವಾಪಂ ಪ್ರಾಪಯತಿ ಶ್ರಮಾಪ ಹೃದಯೇ"** ಎಂದಿದ್ದಾರೆ. ಸಾಧನೆ ಮಾಡಿದ ಮಹಾಭಕ್ತರ ಸಂತೋಷಕ್ಕಾಗಿ ಶ್ರೀಹರಿಯ ನಿದ್ರಾ ವಿಶೇಷವನ್ನು ಮಾಡುತ್ತಾನೆ. ನಿದ್ರಾಕಾಲದಲ್ಲಿ ಶ್ರೀಹರಿಯು ನಾಭಿಯ ಮೇಲಿನ ಕುಕ್ಷ ಪ್ರದೇಶದಲ್ಲಿ ಮುಕ್ತಲೋಕ ಹಾಗೂ ಮುಕ್ತರನ್ನು ಇಟ್ಟು ಸಂತೋಷ ಪಡಿಸುತ್ತಾನೆ. ಹಾಗೆಯೇ ನಾಭಿದೇಶದಲ್ಲಿ ಮೂರು ವಿಧದ ಆಶೇಷ ಸಂಸಾರಿ ಜೀವರನ್ನು ಇಟ್ಟಿರುತ್ತಾನೆ. ನಾಭಿಯ ಕೆಳಭಾಗದ ತಮೋಯೋಗ್ಯರಾದ ಜೀವರನ್ನು ಧರಿಸುತ್ತಾನೆ. ಹೀಗೆ ಚರಾಚರ ಜಗವನ್ನು ಉದರದಲ್ಲಿಟ್ಟ

ಶ್ರೀನಾರಾಯಣನು ಭೂರೂಪದ ಲಕ್ಷ್ಮೀದೇವಿಯಿಂದ ಆಲಿಂಗಿತನಾಗಿರುತ್ತಾನೆ. ಪೂರ್ಣಾನಂದ ಸ್ವರೂಪಿಯಾದ ಶ್ರೀಹರಿಗೆ ಸಿರಿದೇವಿಯು ರತಿಪ್ರದಳಲ್ಲ. ಕಿಂತು ಹರಿಯಿಂದ ರತಿಪಾತ್ರಳಾಗಿದ್ದಾಳೆ. ಅಂದರೆ ಹರಿಯು ರಮೆಯಲ್ಲಿ ಇರುವ ತನ್ನ ಸ್ತ್ರೀರೂಪಗಳೊಂದಿಗೆ ಕ್ರೀಡಿಸುತ್ತಾನೆ. ಇದು ಶ್ರೀಹರಿಯು ಸಿರಿಯಲ್ಲಿ ಮಾಡುವ ಮಹಾ ಅನುಗ್ರಹವು. ಹರಿಯು ಸಿರಿಯಲ್ಲಿರುವ ತನ್ನ ಸ್ತ್ರೀರೂಪದಿಂದ ಕ್ರೀಡಿಸಿ ಆ ರೂಪಕ್ಕೆ ಅಧಿಷ್ಠಾನರೂಪಳಾದ ರಮೆಗೆ ಮಹದಾನಂದವನ್ನು ಶ್ರೀಹರಿಯು ಕರುಣಿಸುತ್ತಾನೆ.

ಅಂತಹ ಮಹಾಮಹಿಮೆಯುಳ್ಳ ಶ್ರೀಹರಿಯನ್ನೇ ಕಾಲನೆಂದು ಹಾಗೂ ಕಾಲಾ ಅವಯವನೆಂದು ಜ್ಞಾನಿಗಳು ತಿಳಿದು ಉಪಾಸಿಸುತ್ತಾರೆ. ವೇದಗಳು ಹರಿಯನ್ನು ಕಾಲರೂಪನೆಂದು ತಿಳಿಸುತ್ತಾ **''ಕಾಲಶ್ಚ ನಾರಾಯಣ''** ಎಂದು ಉದ್ಘೋಶಿಸಿದೆ. ದಾಸರಾಯರು ಕೂಡ **''ಕಾಲಾಂತರ್ಗತ - ಕಾಲನಿಯಾಮಕ ಕಾಲಾತೀತ ತ್ರಿಕಾಲಜ್ಞಃ ಕಾಲ ಪ್ರವರ್ತಕ, ಕಾಲ ನಿವರ್ತಕ ಕಾಲೋತ್ಪಾದಕ ಕಾಲಮೂರ್ತಿ ತವ ದಾಸೋಽಹಂ ತವ ದಾಸೋಽಹಂ''** ಎಂದಿದ್ದಾರೆ. ಜಗತ್‌ಚೇಷ್ಟಕನಾದ ಶ್ರೀಹರಿಯು ಕಾಲಚೇಷ್ಟಕನೂ ಆಗಿದ್ದಾನೆ.

ಅಖಂಡ ಕಾಲದ ಅಧಿದೇವತೆಯಾದ ಶ್ರೀಹರಿ ಅಂತರ್ಯಾಮಿತ್ವೇನ ಕಾಲಾವಯವದ ಸೃಷ್ಟಿಕರ್ತನಾಗಿ ಪರಬ್ರಹ್ಮನಾಗಿದ್ದಾನೆ.

ಇಂತಹ ಕಾಲಾದಿಗಳು ಶ್ರೀಹರಿಯ ಅಧೀನವಾಗಿದೆ. ಈ ವಿಷಯವನ್ನು ಪುರಾಣಗಳಲ್ಲಿ ಸದೃಷ್ಟಾಂತವಾಗಿ ತಿಳಿಯಬಹುದಾಗಿದೆ. ಶ್ರೀಕೃಷ್ಣನು ಶಿವನನ್ನೇ ಕುರಿತು ತಪವನ್ನು ಆಚರಿಸುವ ಸಂದರ್ಭದಲ್ಲಿ ತನ್ನ ಮಹಿಮೆಯಿಂದ ದೀರ್ಘಾವದಿ ಕಾಲವನ್ನು ಅತ್ಯಂತ ಸಂಕ್ಷೇಪಗೊಳಿಸಿದ್ದಾನೆ. ಶ್ರೀಕೃಷ್ಣನು ಬ್ರಾಹ್ಮಣನು ಕುಮಾರನನ್ನು ತರುವ ಸಂದರ್ಭದಲ್ಲಿ ಬಹುಕೋಟಿಯೋಜನ ದೂರದ ಅನಂತಾಸನಕ್ಕೆ ತನ್ನ ರಥದಲ್ಲಿ ಹೋಗಿ ಬಹಳೇ ಸ್ವಲ್ಪಕಾಲದಲ್ಲಿ ಮರಳಿ ದ್ವಿಜಪುತ್ರನ ರಕ್ಷಿಸಿ ತಂದುಕೊಟ್ಟನು. ಈ ಎಲ್ಲಾ ಮಹಿಮೆಗಳ ಕಾಲವು ಶ್ರೀಹರಿಯ ಅಧೀನವೆಂದು ಸೂಚಿಸುತ್ತದೆ.

ಶ್ರೀಹರಿಯು ಕಾಲಾವಯವಗಳ ಸೃಷ್ಟಿಕರ್ತನಾಗಿದ್ದಾನೆ. ಅಂದರೆ ಎರಡು ಪರಮಾಣುಗಳು ಸೇರಿ ಒಂದು ದ್ವ್ಯಣುಕ. ೩ ದ್ವ್ಯಣುಗಳು ಸೇರಿ ಒಂದು ತ್ರ್ಯಣುಕ. ೩ ತ್ರ್ಯಣುಕಗಳು ಒಂದು ತೃಟಿ, ೩ ತೃಟಿಗಳು ೧ ವೇಧ ೩ ವೇಧಗಳು ೧ ಲವ ೩ ಲವಗಳು ೧ ನಿಮಿಷ ೩ ನಿಮಿಷಗಳು ೧ ಕ್ಷಣ, ೫ ಕ್ಷಣಗಳು ೧ ಕಾಷ್ಠ, ೧೫ ಕಾಷ್ಠಗಳು ೧ ಲಘು, ೧೫ ಲಘುಗಳು ೧ ನಾಡಿ, ೨ ನಾಡಿಗಳು ೧ ಮುಹೂರ್ತ, ೩ ಮುಹೂರ್ತಗಳು ಸೇರಿದರೆ ೧ ಘಳಿಗೆ, ೬ ಘಳಿಗೆ ೧ ಪ್ರಹರ, ೭ ರಿಂದ ೮ ಘಳಿಗೆಯವರೆಗೆ ೧ ಯಾಮ, ೮ ಯಾಮ ೧ ಅಹೋರಾತ್ರಿ ದಿನ ೧೫ ದಿನ ೧ ಪಕ್ಷ, ೨ ಪಕ್ಷಗಳು ಸೇರಿ ೧ ಮಾಸ ೨ ಮಾಸಗಳು ಸೇರಿ ೧ ಋತು, ೬ ಮಾಸಗಳಿಗೆ ೧ ಅಯನ, ೨ ಅಯನಗಳು ಸೇರಿ ೧ ಸಂವತ್ಸರವರ್ಷ. ಇಂತಹ ೧೦೦ ವರ್ಷ ಮನುಜನ ಆಯುಷ್ಯ ಪರಿಮಾಣ. ಮನುಷ್ಯನ ೧ ವರ್ಷ ಸ್ವರ್ಗವಾಸಿಗಳಾದ ದೇವತೆಗಳಿಗೆ ೧ ದಿನ. ಉತ್ತರಾಯಣ ಹಗಲು ದಕ್ಷಿಣಾಯನ ರಾತ್ರಿ. ಇಂತಹ ಕೃತಾದಿ ನಾಲ್ಕು ಯುಗಗಳು ಸೇರಿದರೆ ಒಂದು ಮಹಾಯುಗ. ಇಂತಹ ೧೦೦೦ ಚಾತುರ್ಯುಗಗಳು ಬ್ರಹ್ಮದೇವರ ೧ ಹಗಲು ಅಷ್ಟೇ ದೊಡ್ಡದಾದ ರಾತ್ರಿ. ಇಂತಹ ದೊಡ್ಡ ೧೦೦ ವರ್ಷಗಳ ಬ್ರಹ್ಮನ ಆಯುಷ್ಯ ಇಂತಹ ದೀರ್ಘಕಾಲ ಶ್ರೀಹರಿಯ ಒಂದು ಬಾರಿ ಕಣ್ಣು ಮುಚ್ಚಿ ಬಿಡುವ ಕಾಲವಾಗಿದೆ. ಅಂದಮೇಲೆ ಈ ಎಲ್ಲಾ ಮಹಾಯುಗದಿಂದ ಕೊನೆಗೊಳ್ಳುವ ಹಾಗೂ ಪರಮಾಣುಗಳಿಂದ ಆರಂಭವಾಗುವ ಎಲ್ಲಾ ಕಾಲಗಳು ಸೃಷ್ಟಿ ಕರ್ತ ಶ್ರೀಹರಿಯೇ ಆಗಿದ್ದಾನೆ.

ಇಂತಹ ಕಾಲರೂಪಿ ಹರಿಯು ಪ್ರಳಯಕಾಲದಲ್ಲಿ ತನ್ನಿಂದ ಬೇರೆಯಾದ ಇತರೆ ಸಮಸ್ತ ಪ್ರಪಂಚವೂ ಕಾರ್ಯ ಶೂನ್ಯಾವಸ್ಥೆಯಲ್ಲಿ ಇರುವಾಗ ತಾನೊಬ್ಬನೇ ಸರ್ವವನ್ನು ಕಾಣುತ್ತ ಜಾಗೃತಾವಸ್ಥೆಯಲ್ಲಿ ಪೂರ್ಣಾನಂದವನ್ನು ಅನುಭವಿಸುತ್ತಾ ಉಳಿದಿರುವ ಕಾರಣ ಅವನನ್ನು ''**ಪುರುಷ**'' ಎನ್ನುತ್ತಾರೆ.

ಇಂತಹ ಶ್ರೀಹರಿಯು ಎಲ್ಲಾಕಾಲದಲ್ಲಿ ಶಶ್ವದೇಕಪ್ರಕಾರವಾಗಿ ವ್ಯತ್ಯಾಸವಾಗದಂತೆ ಇರುತ್ತಾನೆ. ಆದಕಾರಣ ಅವನನ್ನು ''**ಶೇಷ**''ರೆಂದು ಕರೆಯುತ್ತಾರೆ.

ಇಂತಹ ಹರಿಯ ಚರಣಕಮಲಗಳನ್ನು ಚತುರ್ಮುಖಬ್ರಹ್ಮ ಹಾಗೂ ಶ್ರೀಮುಖ್ಯಪ್ರಾಣರು ಉಪಾಸಿಸುತ್ತಾರೆ. ಆಗ ಈತನೇ ಅನಿರುದ್ಧಾದಿ ರೂಪಗಳಿಂದ ಪ್ರಕಟಗೊಳ್ಳುತ್ತಾರೆ. ಅಲ್ಲದೆ ಗಾಯತ್ರಿ ಸವಿತ ನಾಮಕವಾದ ವಿಷೇಶದಿಂದ ಕೂಡಿರುತ್ತಾನೆ. ಅಲ್ಲದೆ ಗುಣಪೂರ್ಣನಾಗಿ ಬೃಹತ್ ಶರೀರದಿಂದ ಸರ್ವವನ್ನು ವ್ಯಾಪಿಸಿಕೊಂಡಿದ್ದಾನೆ.

**೨೩. ಶೂನ್ಯಾಭಿಧ ಕಾಲಾಭಿಧ ಕೇವಲಾಭಿದ ಬ್ರಹ್ಮಾಭಿಧಾನಂತಾಭಿಧ-ರೂಪವಿಶೇಷಾತ್ಮಕ ನಿರುಪಚರಿತ ಮೂಲರೂಪ ನಿರುಪಚರಿತ ವ್ಯಾಪ್ತಾಪ್ರತಿಬದ್ಧಾನಂತ ತೇಜಃಪುಂಜತಾದೃಶ ರಮಾಯುಕ್ತ ರೂಪವಿಶೇಷಾತ್ಮಕ ಗಾಯತ್ರೀಭೂತವಾಕ್‌ಪೃಥಿವೀಶರೀರ-ಹೃದಯಭೇದೇನ ಷಡ್ವಿಧ ಗಾಯತ್ರೀನಾಮಕ ಲೋಕವೇದಸಮೀರ ರಮಾಂತರ್ಗತ ಪ್ರಣವಾಖ್ಯ ತುರೀಯ ಪಾದೋಪೇತ ಗಾಯತ್ರೀಪಾದಚತುಷ್ಟಯ ಪ್ರತಿಪಾದ್ಯ ವೈಕುಂಠಸ್ಥಿತ ಅನಂತಾ-ಸನಸ್ಥಿತ ಶ್ವೇತದ್ವೀಪಸ್ಥಿತ ಸರ್ವಜೀವಸ್ಥಿತ ರೂಪಭೇದೇನ ಚತೂರೂಪಾತ್ಮಕ-**

ಪ್ರತಿಪದಾರ್ಥ :- ಶೂನ್ಯಾಭಿಧ–ಶೂನ್ಯನಾಮಕನಾದ, ಕಾಲಾಭಿದ–ಕಾಲನಾಮಕನಾದ, ಕೇವಲಾಭಿದ–ಕೇವಲ ನಾಮಕನಾದ, ಬ್ರಹ್ಮಾಭಿದಾ–ಬ್ರಹ್ಮನಾಮಕನಾದ, ಅನಂತಾಭಿದ–ಅನಂತನಾಮಕನಾದ, ರೂಪವಿಶೇಷಾತ್ಮಕ–ಅನಂತನಾಮರೂಪ ವಿಶೇಷವುಳ್ಳವನಾದ, ನಿರುಪಚರಿತ ಮೂಲರೂಪ–ಯಾವುದೇ ಉಪಚಾರವಿಲ್ಲದ ಸ್ವರೂಪಭೂತ ರೂಪಗಳೇ ಆದ, ನಿರುಪಚರಿತವ್ಯಾಪ್ತ–ಉಪಚಾರರಹಿತ ಅಂದರೆ ಮುಖ್ಯಾರ್ಥದಲ್ಲಿ ವ್ಯಾಪಕವಾದ, ಅಪ್ರತಿಬದ್ಧ ಅನಂತ ತೇಜಪುಂಜ–ಪ್ರತಿಬಂಧಕವಿಲ್ಲದ ಅನಂತ ತೇಜೋರಾಶಿಯಿಂದ ಕೂಡಿರುವ, ತಾದೃಶ ರಮಾಯುಕ್ತ–ಅದೇ ರೀತಿಯ ತೇಜದಿಂದ ಕೂಡಿದ ರಮಾದೇವಿಯರ ರೂಪಗಳಿಂದ ಕೂಡಿರುವ, ರೂಪವಿಶೇಷಾತ್ಮಕ–ರೂಪವಿಶೇಷವುಳ್ಳವನೂ ಗಾಯತ್ರೀ–ಭೂತ–ವಾಕ್–ಪೃಥಿವೀ– ಶರೀರ–ಹೃದಯ–ಭೇದೇನ–ಗಾಯತ್ರೀ–ವಾಕ್–ಭೂತ–ವಾಕ–ಪೃಥಿವಿ-

ಶರೀರ–ಹೃದಯುದಲ್ಲಿನ ರೂಪ ವಿಶೇಷಗಳ ಭೇದದಿಂದ ಕೂಡಿದ, ಗಾಯತ್ರಿ–ನಾಮಕ– ಗಾಯತ್ರಿ ನಾಮವುಳ್ಳವನಾದ, ಲೋಕ ವೇದಸಮಿರ ರಮಾಂತರ್ಗತ–ಲೋಕಾಭಿ- ಮಾನಿಗಳು, ವೇದಾಭಿಮಾನಿಗಳೂ, ಮುಖ್ಯಪ್ರಾಣ ಮತ್ತು ಲಕ್ಷ್ಮೀದೇವಿ, ಇವರುಗಳ ಅಂತರ್ಯಾಮಿಯೂ, ಪ್ರಣವಾಖ್ಯ ಪಾದೋಪೇತ–ಓಂಕಾರವೆಂಬ ನಾಲ್ಕನೇ ಪಾದದಿಂದ ಕೂಡಿದ, ಗಾಯತ್ರೀಪಾದ ಚತುಷ್ಟಯ ಪ್ರತಿಪಾದ್ಯ–ಗಾಯತ್ರೀ ಮಂತ್ರದ ನಾಲ್ಕು ಪಾದಗಳ ಪ್ರತಿಪಾದ್ಯನೂ, ವೈಕುಂಠಸ್ಥಿತ–ವೈಕುಂಠವಾಸಿಯಾದ, ಅನಂತಾಸನ ಸ್ಥಿತ–ಅನಂತಾಸನದಲ್ಲಿರುವ, ಶ್ವೇತದ್ವೀಪಸ್ಥಿತ–ಶ್ವೇತದ್ವೀಪದಲ್ಲಿರುವ, ಸರ್ವಜೀವಸ್ಥಿತ– ಸರ್ವರ ಜೀವರಲ್ಲಿರುವುದೆಂಬ, ರೂಪಭೇದೇನ–ರೂಪಭೇದಗಳಿಂದ, ಚತೂರೂಪಾತ್ಮಕ –ನಾಲ್ಕು ರೂಪಗಳುಳ್ಳವನಾದ,

**ತಾತ್ಪರ್ಯ** :- ಶ್ರೀಮಂತ್ರಾಲಯದ ಮಹಾಪ್ರಭುಗಳು ಈ ವಾಕ್ಯಗಳಲ್ಲಿ ಹರಿಯನ್ನು ಬಿಟ್ಟು ಅನ್ಯತ್ರ ಮಾತ್ರ ಪ್ರಸಿದ್ಧಶಬ್ಧಗಳ ಸಮನ್ವಯವನ್ನು ಬ್ರಹ್ಮಸೂತ್ರದಲ್ಲಿ ತಿಳಿಸಿರುವಂತೆ, ಹರಿಯನ್ನು ಕೊಂಡಾಡುತ್ತಾ ಶ್ರೀಹರಿಯನ್ನೇ ಶೂನ್ಯನೆಂದು ಕಾಲನೆಂದೂ ಕೇವಲನೆಂದೂ ಬ್ರಹ್ಮನೆಂದೂ ತಿಳಿಸುತ್ತಾರೆ.

ಶ್ರೀಹರಿಯು ಸುಖಪೂರ್ಣನಾಗಿದ್ದಾನೆ. ಸುಖಪೂರ್ಣನಾದ ಹರಿಯು ಇತರರಲ್ಲಿ ಅವ್ಯಕ್ತನಾಗಿ ಎಲ್ಲರ ಸುಖವನ್ನು ಅಲ್ಪವನ್ನಾಗಿ ಇಡುತ್ತಾನೆ. ಆದ ಕಾರಣ ಶ್ರೀಹರಿಯನ್ನು ಶೂನ್ಯನೆಂದು ಕರೆಯುತ್ತಾರೆ. ಅಂದರೆ ಸುಖಪೂರ್ಣರೇ ಆದ ರಮಾಬ್ರಹ್ಮಾದಿಗಳ ಸುಖವೂ ಕೂಡ ಶ್ರೀಹರಿಯ ಸಾಪೇಕ್ಷಯಿಂದ ಅತ್ಯಲ್ಪವಾಗಿದೆ. ಸ್ವಭಾವ ರಕ್ಷಕನಾದ ಶ್ರೀಹರಿಯ ರಮಾಬ್ರಹ್ಮಾದಿಗಳ ಸುಖವನ್ನು ಅಲ್ಪಗೊಳಿಸುವನಾದ ಕಾರಣ ಶೂನ್ಯನೆನಿಸಿದ್ದಾನೆ. "**ಏಷ ಹ್ಯೇವ ಶೂನ್ಯ, ಏಷ ಏವ ತುಚ್ಛಃ**" ಇತ್ಯಾದಿಯಾಗಿ ಶೃತಿಗಳೂ ಕೂಡ "**ಶೂನ್ಯ**" ಶಬ್ದವನ್ನು ಹರಿಯ ಪರವಾಗಿಯೇ ಬಳಸಿದೆ.

ಹರಿಯು ಕಾಲರೂಪನಾದ ಕಾರಣ ಅಂದರೆ ಪರಮಾಣು ಕಾಲದಿಂದಾರಂಭಿಸಿ ಪರ ಪರಾರ್ಧಕಾಲದವರೆವಿಗೂ ಶ್ರೀಹರಿಯೇ ನಿಯಾಮಕ

ಹಾಗೂ ಅಂತರ್ಯಾಮಿಯಾದ ಕಾರಣ ಶ್ರೀಹರಿಯನ್ನೇ ಕಾಲನೆಂದು ಕರೆದಿದ್ದಾರೆ. ಶೃತಿಯಲ್ಲಿಯೂ ಕಡ "**ಕಾಲಶ್ಚ ನಾರಾಯಣ**" ಎಂದು ಉದ್ಘೋಶಿಸಿದರು.

"**ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ**" ಎಂಬಲ್ಲಿ ಶ್ರೀಹರಿಯನ್ನು "**ಕೇವಲ**" ಎಂಬ ನಾಮದಿಂದ ಶೃತಿ ಕರೆದಿದೆ. ಸಚ್ಚಿದಾನಂದ ಸ್ವರೂಪನಾದ ಕಾರಣ ಶ್ರೀಹರಿಯು ಕೇವಲನೆನಿಸಿದ್ದಾನೆ. "**ಕೇವಲ**" ಎಂದರೆ ಸ್ವತಂತ್ರನೆಂದರ್ಥ. ಹರಿಯಲ್ಲದೆ ಅನ್ಯಸ್ವತಂತ್ರ ವಸ್ತುವೇ ಇಲ್ಲದ ಕಾರಣ ಸ್ವತಂತ್ರನಾಗಿ ಹರಿಯು ಕೇವಲನೆನಿಸಿದ್ದಾನೆ.

ಲೌಕಿಕವಾದ ಹಾಗೂ ವೈದಿಕವಾದ ಧ್ವನ್ಯಾತ್ಮಕವಾದ ಸಕಲ ಶಬ್ದಗಳೂ ಕೂಡ ಹರಿಯ ಅನಂತವಾದ ಗುಣಕರ್ಮಗಳನ್ನು ತಿಳಿಸುವ ಕಾರಣ ಎಲ್ಲವೂ ಬ್ರಹ್ಮಶಬ್ದವಾಚ್ಯಗಳೇ ಆಗಿವೆ. ಹೀಗಾಗಿ ಎಲ್ಲಾ ಗುಣಗಳಿಂದ ಪೂರ್ಣನಾದ ಶ್ರೀಹರಿಯು **ಬ್ರಹ್ಮನೆಂದೂ** ಕರೆಯುಲ್ಪಡುತ್ತಾನೆ.

ಶೂನ್ಯ ಕಾಲ ಕೇವಲ ಬ್ರಹ್ಮ ಇವುಗಳಲ್ಲದೇ ಇನ್ನೂ ಅನೇಕ ಹೆಸರಿನಿಂದ ಹೇಳಲ್ಪಡುವ ಶ್ರೀಹರಿಯ ಅನಂತ ರೂಪ ಉಳ್ಳವನಾಗಿದ್ದಾನೆ. ಆ ಎಲ್ಲಾ ರೂಪಗಳು ಪರಸ್ಪರ ಅತ್ಯಂತ ಅಭಿನ್ನವಾಗಿದೆ. ಅಲ್ಲದೆ ಮೂಲರೂಪವಾದ ನಾರಾಯಣರೂಪದಿಂದಲೂ ಅತ್ಯಂತ ಅಭಿನ್ನಗಳೇ ಆಗಿದೆ. ಅಲ್ಲದೆ ಎಲ್ಲಾ ರೂಪಗಳು ಎಲ್ಲೆಡೆಯಲ್ಲಿ ವ್ಯಾಪ್ತವಾಗಿದೆ. ಅವುಗಳ ತೇಜೋವ್ಯಾಪ್ತಿಯು ಅಡೆತಡೆ ಇಲ್ಲದ್ದಾಗಿದೆ. ಅಲ್ಲದೆ ಆ ಎಲ್ಲಾ ರೂಪಗಳು ಶ್ರೀಹರಿಯಂತೆ ತೇಜಪುಂಜವಾದ ರಮಾರೂಪದಿಂದ ಕೂಡಿದೆ.

ಈ ಬಗೆಯ ಮಹಾಮಹಿಮೋಪೇತನಾದ ಶ್ರೀಹರಿ ಆರುವಿಧ ಗಾಯತ್ರಿ ಪ್ರತಿಪಾದ್ಯನಾಗಿದ್ದಾನೆ. ಈ ರೂಪಗಳನ್ನು ಶ್ರೀಮದಾಚಾರ್ಯರು ಛಾಂದೋಗ್ಯದಲ್ಲಿ ಸಂಗ್ರಹಿಸಿ ತಿಳಿಸಿದ್ದಾರೆ.

ಆ ಬಗೆಯ ಆರು ರೂಪಗಳೆಂದರೆ ೧) ಗಾಯತ್ರಿ ೨) ಭೂತ ೩) ವಾಕ್ ೪) ಪೃಥಿವಿ ೫) ಶರೀರ ೬) ಹೃದಯ.

೧) **ಗಾಯತ್ರೀ** ಮಂತ್ರಪ್ರತಿಪಾದ್ಯ ವಿಷ್ಣುವು ಸ್ತ್ರೀರೂಪ ಹಾಗೂ ಸೂರ್ಯನಂತೆ ಪ್ರಕಾಶವುಳ್ಳವನಾಗಿದ್ದಾನೆ.

೨) ಗಾಯತ್ರಿಮಂತ್ರ ಪ್ರತಿಪಾದ್ಯನಾದ ಮತ್ಸ್ಯ ಮೊದಲಾದ ರೂಪಗಳಿಂದ **ಭೂತ**ನಾಮಕನಾಗಿದ್ದಾನೆ.

೩) ನಾಲಿಗೆಯಲ್ಲಿ ಮಾತನಾಡುವ ಶಕ್ತಿ ಕೊಡುವುದರಿಂದ **ವಾಕ್**ನಾಮಕನಾಗಿದ್ದು ಇದು ಸ್ತ್ರೀರೂಪಿಯಾದ ಹಯಗ್ರೀವನಾಗಿದ್ದಾನೆ.

೪) ಪೃಥಿವಿಯಲ್ಲಿರುವ ಪೀತವರ್ಣನಾದ ಕಾರಣ **ಪೃಥಿವಿ** ಎಂದಿದ್ದಾರೆ.

೫) ಜೀವರ ಸ್ವರೂಪವನ್ನು ವ್ಯಾಪಿಸಿರುವ ಕಾರಣ ಆತನನ್ನೇ **ಶರೀರ**ನಾಮಕನಾಗಿದ್ದಾನೆ.

೬) ಜೀವನ ಹೃದಯಭಾಗದಲ್ಲಿ **ಹೃದಯ**ನಾಮಕನಾಗಿ ಹರಿಯು ಇದ್ದಾನೆ.

ಹೀಗೆ ಶ್ರೀಹರಿಯು ಗಾಯತ್ರಿಯಲ್ಲಿ ಆರು ವಿಧದಿಂದ ಪ್ರತಿಪಾದ್ಯನಾಗಿದ್ದಾನೆ. ಇತನೇ ಲೋಕಾಭಿಮಾನಿಗಳೂ, ವೇದಾಭಿಮಾನಿಗಳೂ ಆದ ಮುಖ್ಯಪ್ರಾಣ ಹಾಗೂ ಶ್ರೀರಮೆ ಇವರೆಲ್ಲರ ಅಂತರ್ಯಾಮಿ ಯಾಗಿ ನಿಯಾಮಕನಾಗಿದ್ದಾನೆ. ಅಂದಮೇಲೆ ಸರ್ವನಿಯಾಮಕನೆಂದು ಹೇಳುವ ಅವಶ್ಯಕತೆ ಬರುವುದಿಲ್ಲ.

'ಓಂ'ಕಾರದಿಂದ ಸಹಿತವಾದ ಚತುಷ್ಪಾದದಿಂದ ಕೂಡಿದ ಗಾಯತ್ರಿಮಂತ್ರಪ್ರತಿಪಾದ್ಯನೂ ಆಗಿದ್ದಾನೆ.

ವೈಕುಂಠ, ಅನಂತಾಸನ, ಶ್ವೇತದ್ವೀಪ ಈ ಮೂರು ನಿತ್ಯಮುಕ್ತಿ ಲೋಕಗಳಲ್ಲಿರುವ ವೈಕುಂಠ, ವಾಸುದೇವ ಹಾಗೂ ನಾರಾಯಣ ಈ ಮೂರು

ರೂಪಗಳು, ಅಲ್ಲದೆ ಸರ್ವರಲ್ಲಿ ಸ್ಥಿತವಾದ ಪುರುಷರೂಪದಿಂದ ಸ್ಥಿತನಾಗಿದ್ದಾನೆ. ಈ ಎಲ್ಲಾ ರೂಪಗಳು ಪರಸ್ಪರ ಅತ್ಯಂತಾಭಿನ್ನವಾಗಿದೆ. ಹೀಗೆ ಹರಿಯು ನಾಲ್ಕು ರೂಪಗಳಿಂದ ಸದಾ ವಿರಾಜಮಾನನಾಗಿದ್ದಾನೆ.

**೨೪. ನಿರುಪಚರಿತಸರ್ವವಾಗರ್ಥಪ್ರತಿಪಾದಕ ಶ್ರೀದೇವ್ಯಾದಿ ರಮಾ-ರೂಪಾಷ್ಟಕಾಭಿಮನ್ಯಮಾನ ಚಕ್ರಶಂಖವರಾಭಯಯುಕ್ತ ಹಸ್ತಚತುಷ್ಟಯೋಪೇತ ಪ್ರದೀಪವರ್ಣಸರ್ವಾಭರಣಭೂಷಿತ.....**

**ಪ್ರತಿಪದಾರ್ಥ :-** ನಿರುಪಚರಿತ–ಪರಮ ಮುಖ್ಯ ವೃತ್ತಿಯಿಂದ, ಸರ್ವ-ವಾಗರ್ಥ- ಪ್ರತಿಪಾದಕ–ಸರ್ವ ಶಬ್ದಾರ್ಥಗಳನ್ನು ಪ್ರತಿಪಾದಿಸುವ, ಶ್ರೀದೇವ್ಯಾದಿ–ಶ್ರೀದೇವಿಯೇ ಮೊದಲಾದ, ರಮಾರೂಪಾಷ್ಟಕ–ರಮಾದೇವಿಯ ಎಂಟು ರೂಪಗಳಿಂದ, ಅಭಿಮನ್ಯಮಾನ–ಅಭಿಮಾನಿಗಳಾಗಿ ಉಳ್ಳ , ಚಕ್ರಶಂಖ–ಚಕ್ರ ಹಾಗೂ ಶಂಖಗಳನ್ನು, ವರಾಭಯಯುಕ್ತ–ವರ ಅಭಯಗಳಿಂದ ಕೂಡಿರುವ, ಹಸ್ತ ಚತುಷ್ಟಯೋಪೇತ–ನಾಲ್ಕು ತೋಳುಗಳಿಂದ ಕೂಡಿದ, ಪ್ರದೀಪವರ್ಣ–ಸೂರ್ಯನಂತೆ ಪ್ರಕಾಶಮಾನವಾದ, ಸರ್ವಾಭರಣಭೂಷಿತ–ಸಕಲ ಆಭರಣಗಳಿಂದ ಅಲಂಕೃತವಾದ ಎಂಬುವುದೇ ಮೊದಲಾಗಿ.

**ತಾತ್ಪರ್ಯ :-** ಸಕಲವಾಕ್ ಮನಸ ದೇವತಾ ರಮೆಯು ವಾಕ್ ಇಂದ್ರಿಯದಲ್ಲಿದ್ದು ತಾನು ಮಾಡುವ ವಾಕವ್ಯಾಪಾರಗಳನ್ನು ಪರಮಮುಖ್ಯ ವೃತ್ತಿಯಿಂದ ಸರ್ವದಾ ಶ್ರೀಹರಿಯನ್ನೇ ಪ್ರತಿಪಾದಿಸುತ್ತಾಳೆ. ಅರ್ಥಾತ್ ಸಕಲ ವರ್ಣಾತ್ಮಕ ಹಾಗೂ ಧ್ವನ್ಯಾತ್ಮಕವಾದ ಅನಂತ ಶಬ್ದಗಳಿಂದ ಶ್ರೀಹರಿಯ ಮಹಿಮೆಯನ್ನು ಪ್ರತಿಪಾದಿಸುತ್ತಾಳೆ. ಶ್ರೀಹರಿಯು ಸರ್ವ ಆಭರಣಗಳಿಂದ ಭೂಷಿತನಾಗಿದ್ದಾನೆ. ಹಾಗೂ ಚಕ್ರ-ಶಂಖ-ವರ-ಅಭಯವೆಂಬ ನಾಲ್ಕು ಭುಜಗಳಿಂದ ಕೂಡಿದ್ದಾನೆ. ರಮಾರೂಪಗಳಿಂದ ಕೂಡಿದ್ದಾಗಿದೆ. ಇದನ್ನು ತಂತ್ರಸಾರದಲ್ಲಿ ಆಚಾರ್ಯರು "**ಮೂರ್ತಯೋಽಷ್ಟಾವಪಿ ಧ್ಯೇಯಾಶ್ಚಕ್ರ-ಶಂಖವರಾಭಯೈಃ । ಯುಕ್ತಾಃ ಪ್ರದೀಪ ವರ್ಣಾಶ್ಚ ಸರ್ವಾಭರಣ ಭೂಷಿತಾಃ ॥**" ಎಂದಿದ್ದಾರೆ.

ಭಗವಂತನು ಧರಿಸಿರುವ ಚಕ್ರಾದಿ ಆಯುಧಗಳ ಹರಿಯ ಸ್ವರೂಪಾತ್ಮಕವೇ ಆಗಿವೆ. ಸ್ವರೂಪಕ್ಕಿಂತಲೂ ಭಿನ್ನವಾದ ಚಕ್ರಾದಿ ಆಯುಧಗಳೂ ಶ್ರೀಹರಿಗೆ ಇದೆ. ಅದರಲ್ಲಿ ಕೆಲವು ಲಕ್ಷ್ಮ್ಯಾತ್ಮಕವೂ ಮತ್ತೆ ಕೆಲವು ಲಕ್ಷ್ಮಿಯಿಂದ ಅಭಿಮನ್ಯವಾದವುಗಳಾಗಿ ಪ್ರಾಕೃತವೆನಿಸಿದೆ. ಅಂತಹ ಸಕಲ ಪ್ರಾಕೃತ ವಸ್ತುಗಳ ನಿರ್ಮಾಣಕ್ಕೆ ಮೂಲವಾದ ಪ್ರಾಕೃತ ತತ್ವಗಳು ಎಂಟು ವಿಧ. ಎಂಟು ತತ್ವಗಳ ಅಭಿಮಾನಿ ಶ್ರೀರಮೆಯೇ ಆಗಿದ್ದಾಳೆ. ಜಗತ್ತಿಗೆ ಕಾಣುವ ಚಕ್ರಾದಿ ಆಯುಧಗಳ ಹಾಗೂ ಆಭರಣಗಳು ಸಾಮಾನ್ಯವಾಗಿ ಪ್ರಾಕೃತಗಳಾಗಿದೆ. ಅವು ಅನಿರುದ್ಧ ಹಾಗೂ ಕಾಮಾದಿ ದೇವತೆಗಳಿಂದ ಅಭಿಮಾನ್ಯವಾಗಿದೆ. ಹೀಗೆ ಲಕ್ಷ್ಮ್ಯಾತ್ಮಕವಾದ ಮತ್ತು ಲಕ್ಷ್ಮಿಯಿಂದ ಅಭಿಮನ್ಯವಾದದ್ದು ಆಗಿ ಚಕ್ರಶಂಖವನ್ನು ಧರಿಸಿದ ಎರಡು ಕರಗಳು ಹಾಗೂ ವರ-ಅಭಯದ ಎರಡು ಕರಗಳು ಒಟ್ಟು ಚತುರ್ಭುಜದಿಂದ ಶೋಭಿಸುತ್ತಾ, ಸೂರ್ಯನಂತೆ ಪ್ರಕಾಶದಿಂದ ಯುಕ್ತವಾದ ಕಿರೀಟ, ಕುಂಡಲ, ಕಂಕಣಹಾರ - ಕಾಂಚಿಯೇ ಮೊದಲಾದ ಆಭರಣಗಳಿಂದ ಭೂಷಿತವಾದ ಓಂಕಾರ ಪ್ರತಿಪಾದ್ಯನನ್ನು ವಿಶ್ವಾದಿ ಅಷ್ಟರೂಪಗಳವನು ಶ್ರೀಹರಿಯು ಎಂಬುದಾಗಿ ಧ್ಯಾನಿಸಬೇಕು.

೨೫. ವಿಶ್ವಾದಿಭಗವದ್ರೂಪಾಷ್ಟಕಪ್ರತಿಪಾದಕ ಅಕಾರಾದ್ಯಷ್ಟಾಕ್ಷರಾತ್ಮಕ ಶ್ರೀಮತ್ಪ್ರಣವಾದ್ಯಷ್ಟಮಹಾಮಂತ್ರಪ್ರತಿಪಾದ್ಯಷ್ಟರೂಪಾತ್ಮಕ ಮಂತ್ರಾಧ್ಯಾಯೋಕ್ತ ಭೂವರಾಹಾದ್ಯಶೇಷ ವೈಷ್ಣವಮಂತ್ರಪ್ರತಿ-ಪಾದ್ಯ ಭೂವರಾಹಾದ್ಯಶೇಷರೂಪವಿಶೇಷಾತ್ಮಕ ರಮಾದಿಮಂತ್ರ-ಪ್ರತಿಪಾದ್ಯ ರಮಾದಿನಿಷ್ಠ ರಮಾದಿನಾಮಕರೂಪವಿಶೇಷಾತ್ಮಕ ಶ್ರೀಲಕ್ಷ್ಮೀನೃಸಿಂಹಾತ್ಮಕ ಪರಮದಯಾಳೋ ಕ್ಷಮಾಸಮುದ್ರ ಭಕ್ತವತ್ಸಲ ಭಕ್ತಾಪರಾಧಸಹಿಷ್ಣೋ ದೇಶಕಾಲಾಧಿಪತೇ ದೇಹೇಂದ್ರಿಯಾಧಿಪತೇ ಸೂರ್ಯವಂಶಧ್ವಜ ರಘುಕುಲತಿಲಕ ಲಕ್ಷ್ಮಣಭರತಶತ್ರುಘ್ನಾಗ್ರಜ ಶ್ರೀಮದ್ಧನುಮದುಪಾಸಿತಚರಣ ಸೀತಾಪತೇ ಶ್ರೀರಾಮಚಂದ್ರ.....

**ಪ್ರತಿಪದಾರ್ಥ :-** ವಿಶ್ವಾದಿ–ವಿಶ್ವ ಮೊದಲಾದ ಭಗವದ್ರೂಪಾಷ್ಟಕ–ಎಂಟು ಹರಿಯ ರೂಪಗಳ, ಪ್ರತಿಪಾದಕ–ಪ್ರತಿಪಾದಿಸುವ, ಅಕಾರಾದ್ಯಷ್ಟಾಕ್ಷರಾತ್ಮಕ–'ಅ' ಕಾರವೇ ಮೊದಲಾದ ಎಂಟು ಅಕ್ಷರಗಳಿಂದ ಕೂಡಿರುವ, ಶ್ರೀಮತ್ಪ್ರಣವಾದಿ – ಮಂಗಳಕರವಾದ ಓಂ ಕಾರವೇ ಮೊದಲಾದ, ಅಷ್ಟಮಹಾಮಂತ್ರ ಪ್ರತಿಪಾದ್ಯ ಎಂಬ ಮಹಾಮಂತ್ರಗಳಿಂದ ಪ್ರತಿಪಾದಿಸಲ್ಪಡುವ, ಅಷ್ಟರೂಪಾತ್ಮಕ–ಎಂಟು ರೂಪಗಳಿಂದ ಕೂಡಿರುವವನು, ಮಂತ್ರಾಧ್ಯಾಯೋಕ್ತ– ತಂತ್ರಸಾರ ಮಂತ್ರಾಧ್ಯಾಯದಲ್ಲಿ ಹೇಳಿರುವ, ಭೂವರಾಹಾದಿ–ಭೂವರಾಹವೇ ಮೊದಲಾದ, ಅಶೇಷ ವೈಷ್ಣವ ಮಂತ್ರ ಪ್ರತಿಪಾದ್ಯ–ಸಕಲ ವೈಷ್ಣವ ಮಂತ್ರಗಳಿಂದ ಪ್ರತಿಪಾದ್ಯನಾದ, ಭೂವರಾಹಾದಿ –ಭೂವರಾಹವೇ ಮೊದಲಾದ, ಅಶೇಷರೂಪ ವಿಶೇಷಾತ್ಮಕ–ವಿಶೇಷ ರೂಪಗಳಿಂದ ಕೂಡಿರುವವನು, ರಮಾದಿ ಮಂತ್ರಪ್ರತಿಪಾದ್ಯ– ರಮೆಯೇ ಮೊದಲಾದ ಮಂತ್ರಗಳಿಂದ ಪ್ರತಿಪಾದಿಸಲ್ಪಡುವ, ರಮಾದಿ ನಿಷ್ಠ–ರಮಾದಿಗಳಲ್ಲೇ ಸ್ಥಿರವಾಗಿ ಇರುವ, ರಮಾದಿನಾಮಕ–ಲಕ್ಷ್ಮಿಯೇ ಮೊದಲಾದ ಹೆಸರುಗಳುಳ್ಳ, ರೂಪವಿಶೇಷಾತ್ಮಕ – ಸ್ತ್ರೀರೂಪ ವಿಶೇಷಗಳುಳ್ಳವನಾದ, ಶ್ರೀ ಲಕ್ಷ್ಮೀನರಸಿಂಹಾತ್ಮಕ – ಶ್ರೀ ಲಕ್ಷ್ಮೀನರಸಿಂಹರೂಪಿಯಾದ ಹರಿಯೇ, ಪರಮದಯಾಳೋ –ಅತಿಯಾದ ದಯಾವಂತನೇ, ಕ್ಷಮಾಸಮುದ್ರ–ಕ್ಷಮಾಗುಣದಿಂದ ಪೂರ್ಣನಾದವನೆ, ಭಕ್ತವತ್ಸಲ–ಭಕ್ತರಲ್ಲಿ ಪ್ರೀತಿಯುಳ್ಳವನೇ, ಭಕ್ತಪರಾಧ ಸಹಿಷ್ಣೋ–ತನ್ನ ಭಕ್ತರು ಮಾಡುವ ಮಹಾಪರಾಧಗಳನ್ನು ಸಹಿಸಿ, ಕ್ಷಮಿಸಿ ರಕ್ಷಿಸುವವನೇ, ದೇಶಕಾಲಾಧಿಪತೇ –ದೇಶಕಾಲಗಳ ನಿಯಾಮಕನೇ, ದೇಹೇಂದ್ರಿಯಾಧಿಪತೇ–ದೇಹ ಹಾಗೂ ಇಂದ್ರಿಯಗಳ ಒಡೆಯನೇ, ಸೂರ್ಯವಂಶಧ್ವಜ–ಸೂರ್ಯವಂಶಕ್ಕೆ ಧ್ವಜ- ಪ್ರಾಯನಾದವನೆ, ರಘುಕುಲತಿಲಕ– ರಘುವಂಶಕ್ಕೆ ತಿಲಕಪ್ರಾಯನೇ, ಲಕ್ಷ್ಮಣಭರತ ಶತೃಘ್ನಾಗ್ರಜ–ಲಕ್ಷಣ, ಭರತ, ಶತ್ರುಘ್ನರಿಗೆ ಅಣ್ಣನಾದವನೆ, ಶ್ರೀಮದ್ಧನುಮದುಪಾಸಿತ ಚರಣ–ಶ್ರೀಹನೂಮಂತದೇವರಿಂದ ನಿತ್ಯದಲ್ಲಿ ಉಪಾಸಿಸುವ ಚರಣವುಳ್ಳವನೇ, ಸೀತಾಪತಿ–ಸೀತಾದೇವಿಯ ಪತಿಯಾದವನೇ, ಶ್ರೀರಾಮಚಂದ್ರ– ಶ್ರೀರಾಮಚಂದ್ರ- ಪ್ರಭುವೇ.....

**ತಾತ್ಪರ್ಯ :-** ಪ್ರಣವವು ಅ–ಉ–ಮ–ನಾದ–ಬಿಂದು–ಘೋಷ–ಶಾಂತ ಹಾಗೂ ಅತಿ ಶಾಂತಗಳೆಂದು ಎಂಟು ವರ್ಣಗಳಿಂದ ಕೂಡಿದೆ. ಈ ಒಂದೊಂದು ವರ್ಣವು ಹರಿಯ ವಿಶ್ವ–ತೈಜಸ–ಪ್ರಾಜ್ಞ–ತುರೀಯ ಆತ್ಮ–ಅಂತರಾತ್ಮ-

ಪರಮಾತ್ಮ ಹಾಗೂ ಜ್ಞಾನಾತ್ಮಗಳೆಂಬ ಎಂಟು ಬಗೆಯ ರೂಪಗಳಿಂದ ಕೂಡಿದೆ. ಇಂತಹ ಎಂಟು ವರ್ಣ ಹಾಗೂ ಆ ವರ್ಣ ಪ್ರತಿಪಾದ್ಯವಾದ ಹರಿಯ ಎಂಟು ರೂಪಗಳಿಂದ ಕೂಡಿದ ಪ್ರಣವವು (ಓಂಕಾರವು) ಅಷ್ಟಮಹಾಮಂತ್ರಗಳಲ್ಲಿ ಮೊದಲನೆಯ ಮಂತ್ರವಾಗಿದೆ. ಈ ಅಷ್ಟ ಮಹಾಮಂತ್ರಗಳ ಅತ್ಯಂತ ಪವಿತ್ರವೂ ಹಾಗೂ ಸಿದ್ಧಿ ಪಡೆದ ಶುದ್ಧಪುರುಷರಿಗೆ ಸರ್ವಾರ್ಥ ಸಿದ್ಧಿದಾಯಕವು ಆಗಿವೆ. ಅಂತಹ ಅಷ್ಟಮಂತ್ರಗಳು ಯಾವುದೆಂದರೆ ೧) ಪ್ರಣವ ೨) ಮಾತೃಕಾಮಂತ್ರ ೩) ನಾರಾಯಣಾಷ್ಟಾಕ್ಷರ ೪) ವ್ಯಾಹೃತಿ ೫) ವಾಸುದೇವ ದ್ವಾದಶಾಕ್ಷರ ೬) ಗಾಯತ್ರಿ ೭) ಪುರುಷಸೂಕ್ತ ೮) ವಿಷ್ಣು ಷಡಕ್ಷರಿ ಇವೇ ಅಷ್ಟಮಹಾ-ಮಂತ್ರಗಳು. ಶ್ರೀ ಮಂತ್ರಾಲಯ ಪ್ರಭುಗಳು "**ಮಂತ್ರಾದ್ಯಾಯೋಕ್ತ ಭೂವರಾಹಾದಿ**" ಎನ್ನುತ್ತಾ, ಅಂದರೆ ತಂತ್ರಸಾರ ಗ್ರಂಥದಲ್ಲಿ ಹೇಳಿರುವ ಭೂವರಾಹವೇ ಮೊದಲಾದ ಅಂದರೆ ನರಸಿಂಹ, ಹಂಸ, ಹಯಗ್ರೀವ, ಕೃಷ್ಣ ವೇದವ್ಯಾಸ, ದದಿವಾಮನ, ಧನ್ವಂತರಿಯೇ ಮೊದಲಾದ ಅಶೇಷ ವೈಷ್ಣವ ಮಂತ್ರಪ್ರತಿಪಾದ್ಯನಾದ ಭೂವರಾಹವೇ ಮೊದಲಾದ ಅಶೇಷ ಭಗವದ್ರೂಪವುಳ್ಳವನು.

ರಮಾದಿ ಎಂಬ ಶಬ್ದದಲ್ಲಿನ ಅದಿ ಎನ್ನುವ ಪದದಿಂದ ಚತುರ್ಮುಖಬ್ರಹ್ಮ ಸರಸ್ವತಿ ಇವೇ ಮೊದಲಾದ ಮಂತ್ರಗಳಿಂದ ಹೇಳುವ ಮತ್ತು ರಮಾದಿಗಳಲ್ಲಿ ಸ್ಥಿರವಾಗಿ ನೆಲಸಿರುವ ಆಯಾಯಾ ನಾಮದಿಂದ ಕರೆಸಿಕೊಳ್ಳುತ್ತಾ ಅಂದರೆ ರಮೆಯಲ್ಲಿ ರಮಾ ಎನ್ನುವ ಹೆಸರಿನಿಂದ ಕರೆಯುವ ಸ್ತ್ರೀವಿಶೇಷರೂಪವಿರುವ ಹೀಗೆ ಬಹುರೂಪಗಳಿಂದ ಶೋಭಿಸುವ ಶ್ರೀಲಕ್ಷ್ಮೀನರಸಿಂಹನು ಪರಮದಯಾಲು ಕ್ಷಮಾಸಮುದ್ರ, ಭಕ್ತವತ್ಸಲ ಹಾಗೂ ಭಕ್ತರು ಮಾಡುವ ಅನೇಕ ತಪ್ಪುಗಳನ್ನು ಕ್ಷಮಿಸುವವನೂ ಆಗಿದ್ದಾನೆ. ಶೃತಿಸ್ಮೃತಿಗಳು ಹರಿಯ ಆಜ್ಞೆಯಾಗಿದೆ. ಅದನ್ನು ಮೀರುವುದೇ ದೊಡ್ಡ ಅಪರಾಧ. ನಾವು ಮಾಡುವ ಈ ಬಗೆಯ ಅಪರಾಧಗಳನ್ನು ಶ್ರೀಹರಿಯು ಕರುಣೆಯಿಂದ ಕ್ಷಮಿಸುತ್ತಾನೆ.

ಸರ್ವಸಾಕ್ಷಿಯಾದ ಶ್ರೀಹರಿಗೆ ಕಾಣದೆ ಇರುವ ಅಪರಾಧಗಳು ಉಂಟೇ? ಆ ಹರಿಯು ಎಲ್ಲವನ್ನು ಪ್ರತ್ಯಕ್ಷವಾಗಿ ನೋಡುತ್ತಾನೆ. ಎಲ್ಲ ಕರ್ಮಗಳನ್ನು ಕರ್ಮಸಾಕ್ಷಿಯಾಗಿ ನೋಡುವ ಹರಿಗೆ ನಾವು ಶರಣಾಗತರಾದರೆ ನಮ್ಮ ಅಪರಾಧಗಳನ್ನು ಶ್ರೀಹರಿ ಕ್ಷಮಿಸುತ್ತಾನೆ. ಹರಿಯ ಭಕ್ತಾಪರಾಧ ಸಹಿಷ್ಣುತೆಯನ್ನು ಶ್ರೀಜಗನ್ನಾಥದಾಸರು ಹರಿಕಥಾಮೃತಸಾರದಲ್ಲಿ ತಿಳಿಸುತ್ತಾ "**ಗೋಪಗುರುವಿನ ಮಡದಿ ಭೃಗು, ನಗಚಾಪ ಮೊದಲಾದವರು ಮಾಡಿದ ಮಹಾಪರಾಧಗಳ ಎಣಿಸಿದನೆ, ಕರುಣಾಳು**" ಎಂದಿದ್ದಾರೆ. ಎಂತಹ ತಪ್ಪುಗಳ ನಮ್ಮಿಂದಾದರೂ ಭಗವಂತನ ಪಾದಕಮಲಗಳಲ್ಲಿ ಶರಣಾಗಿ ಬಂದವರ ಸಕಲ ಪಾಪವನ್ನು ಕಳೆಯುವ ಕರುಣಾಳು ಶ್ರೀಹರಿಯೇ ಆಗಿದ್ದಾನೆ.

ಇಂತಹ ಶ್ರೀಹರಿಯು ದೇಶಾಧಿಪತಿ ಕಾಲಾದಿಪತಿ ದೇಹಾಧಿಪತಿಯೂ ಹಾಗೂ ಇಂದ್ರಿಯಾದಿಪತಿಯು ಆಗಿದ್ದಾನೆ. "**ಈಶೋ ದೇಶಶ್ಚ ಕಾಲಶ್ಚ ಸ್ವಗತ ಏವ ಸರ್ವದಾ**" ಅಂದರೆ ದೇಶ ಕಾಲಗಳು ಸ್ವಗತಗಳು. ಅವು ಆಶ್ರಯರಹಿತವಾದದ್ದು. ಆದರೂ ಅವುಗಳ ಸ್ವತಂತ್ರವುಗಳಲ್ಲಾ. "**ಈಶಾದೀನ ಚ ತೌ ನಿತ್ಯಂ**" ದೇಶಕಾಲಗಳೆರಡು ಶ್ರೀಹರಿಯು ಅಧೀನವಾಗಿವೆ. ಭಾಗವತದಲ್ಲಿ ಅನೇಕ ಲೀಲೆಗಳು ಹರಿ ಮಹಿಮೆಯನ್ನು ದೃಢಪಡಿಸುತ್ತವೆ. ದೇಶ ಹಾಗೂ ಕಾಲಗಳ ಮೇಲೆ ಶ್ರೀಹರಿಯು ತನ್ನ ಪ್ರಭುತ್ವವನ್ನು ಇಟ್ಟಿದ್ದಾನೆ.

ಶ್ರೀಹರಿಯು ದೇಹೇಂದ್ರಿಯಾಧಿಪತಿಯು ಆಗಿದ್ದಾನೆ. ಯದ್ಯಪಿ ದೇಹೇಂದ್ರಿಯಗಳಿಗೆ ಅಭಿಮಾನಿ ದೇವತೆಗಳು ಇದ್ದಾರೆ. ದೇಹೇಂದ್ರಿಯಗಳ ಮೇಲೆ ಅವರಿಗೆ ಅಧಿಕಾರವಿದೆ. ಆದರೆ ಅವರ ಅಂತರ್ಯಾಮಿಯಾಗಿ ವಾಯುದೇವರು ಇದ್ದಾನೆ. ಅವರು ಎಲ್ಲಾ ತತ್ವಾಭಿಮಾನಿಗಳ ಒಳಗಿದ್ದು ಕಾರ್ಯಪ್ರೇರಕರಾಗಿ ಅವರಿಂದ ಕಾರ್ಯಗಳನ್ನು ಮಾಡಿಸುತ್ತಾ ಅವರಿಗೆ ಸ್ವಾಮಿಯಾಗಿದ್ದಾನೆ. ಹಾಗೆ ತತ್ವಾಭಿಮಾನಿಗಳಿಗೆ ಒಡೆಯರಾದ ಶ್ರೀವಾಯುದೇವರ ಒಳಗೆ ಸ್ವತಃ ಶ್ರೀಹರಿಯು ಪ್ರೇರಕನಾಗಿದ್ದು

ವಾಯುದೇವರನ್ನು ನಿಯಮಿಸುವ ಮೂಲಕ ತಾನೇ ದೇಹೇಂದ್ರಿಯಾಧಿಪತಿ ಎನಿಸಿದ್ದಾನೆ. ಇಂತಹ ಹೃಷೀಕೇಶನಾದ ಶ್ರೀಹರಿಯು ಸೂರ್ಯವಂಶಕ್ಕೆ ಧ್ವಜದಂತಿದ್ದಾನೆ. ರಘುಕುಲಕ್ಕೆ ತಿಲಕಪ್ರಾಯನಾಗಿದ್ದಾನೆ. ಲಕ್ಷ್ಮಣ ಭರತ ಶತೃಘ್ನ ಇವರೆಲ್ಲರಿಗೂ ದೊಡ್ಡಣ್ಣನಾಗಿ ಶ್ರೀಹನುಮಂತನಿಂದ ಸದಾ ಉಪಾಸಿಸಲ್ಪಡುವ ಪಾದಪದ್ಮವುಳ್ಳ ಜಾನಕಿಕಾಂತನಾದ ಶ್ರೀರಾಮಚಂದ್ರ ಮಹಾಪ್ರಭುವೇ......

೨೬. ತ್ವದಾಜ್ಞಯಾ ತ್ವತ್ಪ್ರಸಾದಾತ್ ತ್ವತ್ಪ್ರೇರಣಯಾ ತ್ವತ್ಪ್ರೀತ್ಯರ್ಥಂ ತ್ವಾಮುದ್ದಿಶ್ಯ ತ್ವಾಮನುಸ್ಮರನ್ನೇವ ತ್ವದಾಜ್ಞಯಾ ನಿಯತೇ ಮನ್ನಿಯಾಮಕೇಕ ಸತ್ತಾಪ್ರದವಾಯುನಾಮಕ ಚೇಷ್ಟಾಪ್ರದ ಪ್ರಾಣನಾಮಕ ಧಾರಣಾಪ್ರದಧರ್ಮನಾಮಕ ಮುಕ್ತಿಪ್ರದಭಕ್ತಿ-ನಾಮಕ ರೂಪವಿಶೇಷೈರ್ಮದ್ಧೃದಿಸ್ಥಿತೇನ ಪರಮದಯಾಳುನಾ ಕ್ಷಮಾಸಮುದ್ರೇಣ ಭಕ್ತವತ್ಸಲೇನ ಭಕ್ತಾಪರಾಧಸಹಿಷ್ಣುನಾ ಸರ್ವಸ್ವಾಮಿನಾ ಸರ್ವಪ್ರೇರಕೇಣ ಸರ್ವತಾತ್ವಿಕದೇವತಾ-ಪ್ರೇರಕೇಣ ಸರ್ವತಾತ್ತ್ವಿಕಾಸುರ ಭಂಜಕೇನ ತಥಾ ತತ್ಪ್ರೇರಣಾ-ಪ್ರಯುಕ್ತಾಶೇಷ ದುರ್ಮತಭಂಜಕೇನ ಅತ ಏವ ಪ್ರಭಂಜನಶಬ್ದವಾಚ್ಯೇನ.....

**ಪ್ರತಿಪದಾರ್ಥ :-** ತ್ವದಾಜ್ಞಯಾ–ನಿನ್ನಾಜ್ಞೆಯಿಂದ, ತತ್ಪ್ರಸಾದಾತ್–ನಿನ್ನ ಪ್ರಸಾದದಿಂದ ತ್ವತ್ಪ್ರೇರಕೇಣ–ನಿನ್ನ ಪ್ರೇರಣೆಯಿಂದ, ತ್ವತ್ಪ್ರೀತ್ಯರ್ಥಂ–ನಿನ್ನ ಪ್ರೀತಿಗಾಗಿಯೇ, ತ್ವಾಮುದ್ದಿಶ್ಯ–ನಿನ್ನ ಉದ್ದೇಶದಿಂದಲೇ, ತ್ವಾಮನುಸ್ಮರನ್ನೇವ–ನಿನ್ನ ಸ್ಮರಣೆಯುಕ್ತ- ನಾಗಿಯೇ, ತ್ವದಾಜ್ಞಯಾ–ನಿನ್ನಾಜ್ಞೆಯಿಂದಲೇ, ನಿಯತೇ–ನಿಯತನಾದ, ಮನ್ನಿಯಾಮಕೇನ–ನನ್ನ ನಿಯಾಮಕರಾದ ವಾಯುದೇವರಿಂದ ಪ್ರೇರಿತನಾಗಿ ಸಕಲ ಕಾರ್ಯಗಳನ್ನು ಮಾಡುವನೆಂದು ಸಂಕಲ್ಪಿಸಿ, ಸಕಲ ಕರ್ಮವನ್ನು ಮಾಡುತ್ತೇನೆ. ಎಂದು ಹೇಳಿ ಮುಂದೆ ವಾಯುದೇವರ ಮಹಿಮೆಯನ್ನು ಹೇಳುತ್ತಾ, ಸತ್ತಾಪ್ರದ–ಇರುವಿಕೆಗೆ ಕಾರಣನಾದ, ವಾಯುನಾಮಕ–ವಾಯುದೇವನೆಂದು ಹೆಸರುಳ್ಳ, ಚೇಷ್ಟಾಪ್ರದ–ಕ್ರಿಯಾಶಕ್ತಿ ಕೊಡುವವನಾಗಿ,

ಪ್ರಾಣಮಕ–ಪ್ರಾಣದೇವನೆಂದು ಹೆಸರುಳ್ಳ, ಧಾರಣಪ್ರದ–ಧಾರಕಶಕ್ತಿಪ್ರದನಾಗಿ, ಧರ್ಮನಾಮಕ–ಧರ್ಮನೆಂದು ಹೆಸರುಳ್ಳ, ಮುಕ್ತಿಪ್ರದ–ಮುಕ್ತಿಯನ್ನು ಕೊಡುವವನಾಗಿ, ಭಕ್ತಿನಾಮಕ–ಭಕ್ತಿ ಎಂದು ಹೆಸರುಳ್ಳ, ರೂಪವಿಶೇಷ್ಯೆ–ಬೇರೆ ಬೇರೆ ರೂಪಗಳಿಂದ, ಮದ್ಹೃದಿಸ್ಥಿತೇನ–ನನ್ನ ಹೃದಯಮಂದಿರದಲ್ಲಿ ಇರುವವನಾದ, ಪರಮದಯಾಳುನಾ– ಪರಮದಯಾವಂತನಾದ, ಕ್ಷಮಾಸಮುದ್ರೇಣ–ಅಪಾರವಾದ ಕ್ಷಮಾಗುಣಗಳಿಂದ ಕೂಡಿದವನಾದ, ಭಕ್ತವತ್ಸಲೇನ–ಭಕ್ತರಲ್ಲಿ ವಾತ್ಸಲ್ಯವನ್ನು ತೋರುವವನಾದ, ಭಕ್ತಪರಾಧ ಸಹಿಷ್ಣುನಾ–ತಮ್ಮ ಭಕ್ತರು ಮಾಡಿರುವ ತಪ್ಪುಗಳನ್ನು ಕ್ಷಮಿಸಿ ಸಲಹುವವನಾದ, ಸರ್ವಸ್ವಾಮಿನಾ–ಸರ್ವಸ್ವಾಮಿಯಾದ, ಸರ್ವಪ್ರೇರಕೇಣ – ಸರ್ವರನ್ನೂ ಸರ್ವರೀತಿ- ಯಿಂದಲೂ ಪ್ರೇರೇಪಿಸುವವನಾದ, ಸರ್ವತಾತ್ವಿಕ-ದೇವತಾಪ್ರೇರಕೇಣ–ಸಕಲ ತತ್ವಾಭಿಮಾನಿ ದೇವತೆಗಳನ್ನು ಪ್ರೇರೇಪಿಸುವವನಾದ, ಸರ್ವತಾತ್ವಿಕಾಸುರಭಂಜಕೇನ– ಸಕಲ ತಾತ್ವಿಕಾಸುರರನ್ನು ನಿಗ್ರಹಿಸುವವನಾದ, ತಥಾ–ಹಾಗೆಯೇ, ತತ್ಪ್ರೇರಣಾಯ ಪ್ರಯುಕ್ತ–ಅವರ ಪ್ರೇರಣೆಯಿಂದಲೇ ಆದ, ಅಶೇಷ ದುರ್ಮತ ಭಂಜಕೇನ–ಸಕಲ ದುರ್ಮತಗಳನ್ನು ನಿಗ್ರಹಿಸುವವರಾದ, ಅಥ ಏವ–ಆದ ಕಾರಣದಿಂದಲೇನೆ, ಪ್ರಭಂಜನ ಶಬ್ದವಾಚ್ಯೇನ–ಆದಕಾರಣದಿಂದಲೇ ಪ್ರಭಂಜನ ಶಬ್ದಪ್ರತಿಪಾದ್ಯರಾದ.....

**ತಾತ್ಪರ್ಯ** :- ಲಕ್ಷ್ಮಣ ಭರತ ಶತೃಘ್ನ ಅಗ್ರಜ ಹನುಮದುಪಾಸಿತಚರಣ ಸೀತಾಪತಿ ಶ್ರೀರಾಮಚಂದ್ರಪ್ರಭುವೇ, ವೇದ ವೇದಾಂತಾದಿಗಳಲ್ಲಿ ಹೇಳಿ ಆಜ್ಞೆಯಂತೆ ನಿನ್ನ ಪ್ರಸಾದದಿಂದ ನಿನ್ನ ಪ್ರೇರಣೆಯಿಂದಾಗಿ ನಿನ್ನ ಪ್ರೀತಿಗೋಸ್ಕರವಾಗಿ ನಿನ್ನನ್ನೇ ಉದ್ದೇಶಿಸಿ ನಿನ್ನನ್ನೇ ಸ್ಮರಿಸುವವನಾಗಿ, ಸದಾಕಾಲದಲ್ಲಿ ನನ್ನ ಸ್ವಾಮಿ ನನ್ನನ್ನೇ ಆಳುವ ಹಾಗೂ ಸಕಲ ಚರಾಚರಾತ್ಮಕವಾದ ಈ ಸಮಸ್ತ ಪ್ರಪಂಚವನ್ನು ಆಳುವ ಸ್ವಾಮಿ ಎಂದು ಸ್ಮರಿಸುತ್ತಾ ನಿನ್ನ ಅಪ್ಪಣೆಯಿಂದಲೇ ಸಕಲ ಕರ್ಮಗಳನ್ನು ಮಾಡುತ್ತೇನೆ ಹಾಗೂ ನನ್ನವರಿಂದ ಮಾಡಿಸುತ್ತೇನೆ ಎಂಬುದಾಗಿ ಶ್ರೀಗುರುರಾಜರು ತಿಳಿಸುತ್ತಾ ಮತ್ತು ಶ್ರೀವಾಯುದೇವರು ಮಹಿಮಾತಿಶಯವನ್ನು ಕೊಂಡಾಡುತ್ತಾರೆ. ಶ್ರೀಹರಿಯ ಆಜ್ಞೆಯಿಂದ ಸಕಲಜೀವ ಜಂತುಗಳಲ್ಲಿ ವಾಯುದೇವರು ತಾವು ಜೀವಾಂತರ್ಯಾಮಿಯಾಗಿ ನಿಂತು ಸಕಲಕರ್ಮವನ್ನು

ಮಾಡಿಸುವವರು. ಜೀವನಾದ ನಾನು ಸ್ವತಂತ್ರಕರ್ತೃವಲ್ಲ ಕಿಂತು ನನ್ನ ಆಜ್ಞಾವರ್ತಿಯಾದ ಶ್ರೀವಾಯುದೇವರು ಮುಖ್ಯ ಕರ್ತೃಗಳಾಗಿದ್ದಾರೆ. ಇಂತಹ ಶ್ರೀವಾಯುದೇವರು ಜೀವರಿಗೆ ಸತ್ತಾಪ್ರದನಾಗಿ ಶ್ರೀವಾಯುದೇವರೆನಿಸಿದ್ದಾರೆ. ಜೀವರಿಗೆ ಚೇಷ್ಟಾಪ್ರದನಾಗಿ ಪ್ರಾಣನೆನಿಸಿದ್ದಾರೆ. ಜೀವರಿಗೆ ಸರ್ವರೀತಿಯಿಂದಲೂ ಆಶ್ರಯ ನೀಡಿರುವ ಕಾರಣ ಧರ್ಮನೆಂಬುದಾಗಿ ಕರೆಯುತ್ತಾರೆ.

ಮುಕುತಿಗೆ ಅತಿ ಅವಶ್ಯಕವಾದ ಭಕ್ತಿಯನ್ನು ಕೊಡುವವರು ಈ ವಾಯುದೇವರೇ ಆಗಿದ್ದಾರೆ. ಈ ವಾಯುದೇವರ ಸಕಲ ಸಚ್ಚೇತನರಿಗೆ ಮುಕ್ತಿಗೆ ಸಾಧನವನ್ನು ಒದಗಿಸಿಕೊಡುವಕಾರಣ ಭಕ್ತಿ ಎನಿಸಿದ್ದಾರೆ.

ಯದ್ಯಪಿ ಮೋಕ್ಷವನ್ನು ಹೊಂದಲು ಶ್ರೀಹರಿಯ ಪ್ರಸಾದವೇ ಮುಖ್ಯಕಾರಣ. "**ಏನಂ ಮೋಚಯಾಮಿ**" ಎಂದು ಹರಿಯ ಸಂಕಲ್ಪ ಬರಲು ಆತನಲ್ಲಿ ಮಾಡುವ ಭಕ್ತಿಯೇ ಕಾರಣ. ಇಂತಹ ಭಕ್ತಿಗೆ ಹರಿಯ ಬಗೆಗೆ ಇರುವ ದೃಢವಾದ ಜ್ಞಾನಕಾರಣವಾಗುತ್ತದೆ. ಜ್ಞಾನಪುರಸ್ಸರವಾದ ಸ್ನೇಹ ಹಾಗೂ ಪ್ರೀತಿಯೇ ಭಕ್ತಿ.

ಇಂತಹ ಗುಣಗಳಿಂದ ಕೂಡಿದ ಶ್ರೀವಾಯುದೇವರು ಅನಂತಜೀವರಲ್ಲಿ ಇದ್ದು ಆಯಾಯ ಜೀವರಿಗೆ ಜ್ಞಾನ ಹಾಗೂ ಭಕ್ತಿ ಪ್ರಧಾನನಾಗಿದ್ದಾನೆ. ವಾಯುದೇವರು ಜ್ಞಾನಾದಿಗಳನ್ನು ಕೊಡದಿದ್ದರೆ ಅನ್ಯರು ಕೊಡುವಂತಿಲ್ಲಾ, ಯಾರು ವಾಯುದೇವರನ್ನು ಶರಣು ಹೊಂದುತ್ತೀರೋ ಅವರಿಗೆಲ್ಲಾ ತಪ್ಪದೇ ಜ್ಞಾನಾದಿಗಳನ್ನು ಅನುಗ್ರಹಿಸುತ್ತಾನೆ. ಹೀಗೆ ಎಲ್ಲಾ ಬಗೆಯಿಂದಲೂ ಮುಕ್ತಿಗೆ ಕಾರಣವಾದ ಭಕ್ತಿ ಕೊಟ್ಟು ಮುಕ್ತಿಯನ್ನು ಶ್ರೀವಾಯುದೇವರು ಹರಿಯ ಅನುಗ್ರಹದಿಂದ ಕೊಡುವ ಶಕ್ತರು ಆಗಿದ್ದಾರೆ. "**ವಿಷ್ಣುರ್ಹಿ ದಾತಾಮೋಕ್ಷಸ್ಯ ವಾಯುಶ್ಚ ತದನುಜ್ಞಯಾ**" ಎಂದು ಹೇಳಿದ್ದಾರೆ. ಈ ಎಲ್ಲಾ ಕಾರಣಗಳಿಂದ ವಾಯುದೇವರು ಭಕ್ತಿ ಶಬ್ದವಾಚ್ಯವಾಗಿದ್ದಾರೆ. ಭಕ್ತಿಯು ನವವಿಧ. ಅದು ಶ್ರವಣ.

ಕೀರ್ತನ, ಸ್ಮರಣೆ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ. ಇವು ಪ್ರತಿಯೊಂದುಕ್ಕೂ ಕೂಡ ವಿಷ್ಣುವಿನ ಅನುಗ್ರಹರೂಪಪ್ರಸಾದ ಅತ್ಯವಶ್ಯಕವು. ಒಬ್ಬ ಸಾಧಕನಲ್ಲಿಒಂದು ಅಥವಾ ಒಂದಕ್ಕಿಂತ ಹೆಚ್ಚಾಗಿ ಭಕ್ತಿಯ ಪ್ರಾಕಾರಗಳ ಇರಬಹುದು. ಅದು ಜೀವರ ಯೋಗ್ಯತೆಯನ್ನು ಅನುಸರಿಸಿ ಭಿನ್ನ ಜೀವರಲ್ಲಿ ಭಿನ್ನಪ್ರಕಾರ ಭಕ್ತಿಗಳು ಇರುತ್ತದೆ. ಈ ಎಲ್ಲಾ ಭಕ್ತಿಯ ಪ್ರಾಕಾರಗಳು ಶುದ್ಧನಾಗಿರಬೇಕು. ಭಕ್ತಿಯ ಶುದ್ಧತೆಯೆಂದರೆ ದ್ವೇಷರಹಿತವಾದ ಭಕ್ತಿಯೇ ಆಗಿದೆ. ದ್ವೇಷವು ಕೂಡ ೯ ವಿಧವಾಗಿದೆ. ೧) ಗುಣಶೂನ್ಯನೆಂದು ತಿಳಿಯುವುದು ೨) ಗುಣಗಳು ಅಪೂರ್ಣನೆಂದು ತಿಳಿಯುವುದು. ೩) ಜೀವನು ಹರಿಗಿಂತ ಅಭಿನ್ನ ಎಂದು ತಿಳಿಯುವುದು ೪) ಬ್ರಹ್ಮ-ರಮೆಯರು ಹರಿ ಸಮರೆಂದು ತಿಳಿಯುವುದು. ೫) ಒಬ್ಬರು ಅಂದರೆ ರಮೆ ಅಥವಾ ಬ್ರಹ್ಮ ಹರಿಗೆ ಸಮರೆನ್ನುವುದು ೬) ರೂಪ ಅವಯವಗಳಲ್ಲಿ ಭೇದ ತಿಳಿಯುವುದು ೭) ಅವತಾರವನ್ನು ಪ್ರಾಕೃತವೆಂದು ತಿಳಿಯುವುದು ೮) ಹರಿಭಕ್ತರಲ್ಲಿ ದ್ವೇಷ ಮಾಡುವುದು ೯) ವೇದಾದಿಪ್ರಮಾಣಗಳನ್ನು ನಿಂದಿಸುವುದು. ಯಾವುದೇ ಬಗೆಯ ದ್ವೇಷವನ್ನು ಮಾಡದೆ ಶ್ರೀಹರಿಯಲ್ಲಿ ಭಕ್ತಿ ಮಾಡುವುದು ಶುದ್ಧ ಭಕ್ತಿಯಾಗುತ್ತದೆ. ಹೀಗೆ ದ್ವೇಷದ ಸಂಬಂಧವಿಲ್ಲದ ಶುದ್ಧವಾದ ಭಕ್ತಿಯನ್ನು ವಾಯುದೇವರು ಜೀವರಿಗೆ ಕೊಡುವ ಕಾರಣ ಭಕ್ತಿಶಬ್ದವಾಚ್ಯರಾಗಿದ್ದಾರೆ. ಹೀಗೆ ವಾಯು, ಪ್ರಾಣಾದಾರಣ, ಭಕ್ತಿಯೇ ಮೊದಲಾದ ರೂಪಗಳಿಂದ ನಮ್ಮ ಹೃದಯದಲ್ಲಿ ಸ್ಥಿತರಾದ ಶ್ರೀವಾಯುದೇವರು ಅತ್ಯಂತ ಕರುಣಾಳುಗಳು. ಕರುಣೆ ಎನ್ನುವ ಗುಣ ಶ್ರೀಹರಿಯಲ್ಲಿ ಅನಂತ ಮಡಿ ಇದೆ. ಅನಂತ ಕಾರಣ್ಯದಿಂದ ಕೂಡಿರುವ ಶ್ರೀಹರಿಗೆ ಶ್ರೀವಾಯುದೇವರು ಮುಖ್ಯ ಪ್ರತಿಬಿಂಬರಾದ ಕಾರಣ ವಾಯುದೇವರಲ್ಲಿ ಹರಿಯ ಗುಣದ ಸಾದೃಶ್ಯ ಉಳಿದೆಲ್ಲಾ ಜೀವರಿಗಿಂತ ಅಧಿಕವಾಗಿದೆ. ಆದರೆ ಹರಿಯು ಭಕ್ತರು ಮಾಡುವ ಅಪರಾಧಗಳನ್ನು ಅತಿಯಾಗಿ ಕ್ಷಮಿಸುತ್ತಾನೆ. ಹರಿಯ ಭಕ್ತಾಗ್ರಣಿಯಾದ ವಾಯುದೇವರು ಮಾತ್ರ ಜೀವರು ಹರಿಯಲ್ಲಿ ಮಾಡಿದ ಅಪರಾಧಗಳನ್ನು ಹಾಗೆ ಕ್ಷಮಿಸಲಾರರು. ಅವರು ಭಕ್ತರನ್ನು

ಹೆಚ್ಚು ಹೆಚ್ಚಾಗಿ ಪರೀಕ್ಷೆಗೆ ಒಳಪಡಿಸಿ ಅವರ ಯೋಗ್ಯತೆಯನ್ನು ನಿರ್ಧರಿಸಿ ಶ್ರೀಹರಿಯ ಪ್ರಸಾದಕ್ಕಾಗಿ ಶ್ರೀಹರಿಯಲ್ಲಿ ಜೀವರ ಪರವಾಗಿ ಪ್ರಾರ್ಥನೆ ಮಾಡುತ್ತಾರೆ.

ಇಂತಹ ಶ್ರೀವಾಯುದೇವರು ಸರ್ವಸ್ವಾಮಿಯಾಗಿ ಸರ್ವರಿಗೂ ಪ್ರೇರಕರಾಗಿದ್ದಾರೆ. ನಮ್ಮೆಲ್ಲರ ದೇಹದಲ್ಲಿ ತತ್ವಾಭಿಮಾನಿ ಹಾಗೂ ಅತತ್ವಾಭಿಮಾನಿಗಳು ಇದ್ದಾರೆ. ಈ ವಾಕ್ಯದಲ್ಲಿ ಗುರುಗಳು ವಾಯುದೇವರು ತತ್ವಾಭಿಮಾನಿಗಳಿಗೆ ಪ್ರೇರಕನು ಅತತ್ತ್ವಾಭಿಮಾನಿಗಳ ಭಂಜಕನೆಂದು ತಿಳಿಸಿದ್ದಾರೆ.

ಶ್ರೀವಾಯುದೇವರು ದೇಹಗತರಾದ ತತ್ತ್ವಾಭಿಮಾನಿಗಳ ಒಳಗಿದ್ದು ಅವರನ್ನು ಧರ್ಮಕಾರ್ಯಗಳಲ್ಲಿ ಪ್ರೇರಿಸಿದರೆ ಅದೇ ವಾಯುದೇವರು ಅತತ್ವಾಭಿಮಾನಿಗಳಾದ ದುಷ್ಕರ್ಮ ಪ್ರಚೋದಕರಾಗಿ ಅಸುರರನ್ನು ಭಂಜಿಸುವವರು ಆಗಿದ್ದಾರೆ. ವಾಯುದೇವರು ಪಾಪಪ್ರೇರಕ ಪ್ರಯತ್ನಗಳನ್ನು ಭಂಜಿಸಿ ಭಕ್ತರಾದವರನ್ನು ರಕ್ಷಿಸುವ ಕಾರಣ ಪ್ರಭಂಜನ ಶಬ್ದದಿಂದ ಪ್ರಸಿದ್ಧರಾಗಿದ್ದಾರೆ.

೨೭. **ಪ್ರತಿದಿನಂ ಪ್ರತಿಕ್ಷಣಂ ಬುದ್ಧಿಶೋಧಕೇನ ಸರ್ವಕರ್ಮಕರ್ತ್ರಾ ಸರ್ವಕರ್ಮ ಕಾರಯಿತ್ರಾ ಸರ್ವಕರ್ಮಸ್ವಾಮಿನಾ ಸರ್ವಕರ್ಮ-ಸಮರ್ಪಕೇಣ ಸರ್ವಕರ್ಮಫಲಭೋಕ್ತ್ರಾ ಸರ್ವಕರ್ಮಫಲ-ಭೋಜಯಿತ್ರಾ ಸರ್ವಕರ್ಮಪ್ರೇರಕೇಣ ಸರ್ವಕರ್ಮೋದ್ಬೋಧ-ಕೇನ ಸರ್ವಕರ್ಮಶುದ್ಧಿಪ್ರದೇನ ಸರ್ವಕರ್ಮಸಿದ್ಧಿಪ್ರದೇನ ಸರ್ವಕರ್ಮನಿಷ್ಠೇನ ಸರ್ವಕರ್ಮಸಾಕ್ಷಿಣಾ ಸರ್ವಕರ್ಮನಿಷ್ಠ ಭಗವದ್ರೂಪೋಪಾಸಕೇನ....**

ಪ್ರತಿಪದಾರ್ಥ :- ಪ್ರತಿದಿನಂ–ಪ್ರತಿದಿನವೂ, ಪ್ರತಿಕ್ಷಣಂ–ಪ್ರತಿಕ್ಷಣದಲ್ಲಿಯೂ, ಬುದ್ಧಿಶೋದಕೇನ –ಬುದ್ಧಿಶುದ್ಧಗೊಳಿಸುವವರಾಗಿ, ಸರ್ವಕರ್ಮಕರ್ತಾ–ಸಕಲ

ಕರ್ಮವನ್ನು ಮಾಡುವವರೂ, ಸರ್ವಕರ್ಮಕಾರಯಿತ್ರಾ–ಸಕಲ ಕರ್ಮಗಳನ್ನು ಜೀವರಿಂದ ಮಾಡಿಸುವವರಾದ, ಸರ್ವಕರ್ಮಸ್ವಾಮಿನಾ–ಸರ್ವಕರ್ಮಗಳಿಗೂ ಸ್ವಾಮಿಯೂ, ಸರ್ವಕರ್ಮ ಸಮರ್ಪಕೇಣ–ಸಕಲ ಕರ್ಮಗಳನ್ನು ಹರಿಯಲ್ಲಿ ಸಮರ್ಪಿಸುವವರಾದ, ಸರ್ವಕರ್ಮಫಲಭೋಕ್ತ್ರಾ–ಸಕಲ ಕರ್ಮ ಫಲಭೋಕ್ತರಾದ, ಸರ್ವಕರ್ಮಫಲ- ಭೋಜಯಿತ್ರಾ–ಸರ್ವಕರ್ಮಗಳ ಫವನ್ನು ಅನುಭವವನ್ನು ಜೀವನಿಗೆ ತಂದುಕೊಡುವವರಾದ, ಸರ್ವಕರ್ಮಪ್ರೇರಕೇಣ–ಸರ್ವಕರ್ಮವನ್ನು ಪ್ರೇರಿಸು- ವವರಾದ, ಸರ್ವಕರ್ಮೋದ್ಬೋದಕೇನ–ಸಕಲ ಕರ್ಮಗಳ ಉದ್ಬೋದಕರು ಆದ, ಸರ್ವಕರ್ಮ ಶುದ್ಧಿಪ್ರದೇನ–ಸಕಲ ಕರ್ಮಗಳನ್ನು ಶುದ್ಧಿ ಮಾಡುವವರಾದ, ಸರ್ವಕರ್ಮಸಿದ್ಧಿಪ್ರದೇನ–ಸಕಲ ಕರ್ಮಗಳಿಗೂ ಪೂರ್ಣತೆಯನ್ನು ತಂದುಕೊಡು- ವವರಾದ, ಸರ್ವಕರ್ಮ ನಿಷ್ಠೇನ–ಸಕಲ ಕರ್ಮದಲ್ಲಿಯೂ ನಿಷ್ಠೆಯುಳ್ಳವರಾದ, ಸರ್ವಕರ್ಮಸಾಕ್ಷಿಣಾ–ಎಲ್ಲರ ಎಲ್ಲಾ ಬಗೆಯ ಕರ್ಮವನ್ನು ಸಾಕ್ಷಾತ್ತಾಗಿ ನೋಡುವವರಾದ, ಸರ್ವಕರ್ಮನಿಷ್ಠ–ಸರ್ವಕರ್ಮಗಳಿಂದ ಪ್ರತಿಪಾದ್ಯವಾದ, ಭಗವದ್ರೂಪೋಪಾಸಕೇನ–ಭಗವಂತನ ರೂಪಗಳನ್ನು ಧ್ಯಾನಿಸುವವರಾದ.....

**ತಾತ್ಪರ್ಯ** :- ಶ್ರೀಹರಿವಾಯುಗಳು ಪ್ರತಿದಿನವೂ ಪ್ರತಿಕ್ಷಣದಲ್ಲಿಯೂ ನಮ್ಮ ಮನವನ್ನು ಶುದ್ಧಿಗೊಳಿಸುವವರಾಗಿದ್ದಾರೆ. ಮನವನ್ನು ಶುದ್ಧಿಗೊಳಿಸುವುದೆಂದರೆ ಅಂತಃಕರಣದಲ್ಲಿ ಇರುವ ರಾಗಾದಿ ದ್ವೇಷರೂಪದ ಮೂಲವನ್ನು ಕಳೆದು ಸಾರಾಸಾರ ವಿವೇಕ ಸಾಮರ್ಥ್ಯ ಹೆಚ್ಚಾಗುವಂತೆ ಮಾಡುವುದೇ ಬುದ್ಧಿಶೋಧನೆಯಾಗಿದೆ. ಹೀಗೆ ನಮ್ಮ ಮನವನ್ನು ಶುದ್ಧಿಗೊಳಿಸಿ ಸಕಲಕರ್ಮವನ್ನು ಮಾಡುವವನು ಹಾಗೂ ಜೀವರಿಂದ ಮಾಡಿಸುವವರೂ ಆಗಿದ್ದಾರೆ.

ಅಂದರೆ ಶ್ರೀಹರಿಯೇ ಸರ್ವಕರ್ಮ "**ಮುಖ್ಯಕರ್ತ**" ಮತ್ತು "**ಕಾರಯಿತಾ**" ಆಗಿದ್ದಾನೆ. ಬಿಂಬರೂಪಿಯಾದ ಶ್ರೀಹರಿಯು ಮಾಡದಿರುವ ಯಾವುದನ್ನು ಪ್ರತಿಬಿಂಬರೂಪಿಯಾದ ಜೀವ ಮಾಡಲಾರ, ಹೀಗಾಗಿ ಪ್ರತಿಬಿಂಬನ ಸರ್ವಕ್ರಿಯೆಗಳ ಬಿಂಬನಾದ ಶ್ರೀಹರಿಗೆ ಅಧೀನವಾಗಿರುತ್ತದೆ. "**ಯತಾಶ್ನಾತಿ ತದಾಶ್ನಾತಿ ಯದಾವಕ್ತಿ ತದೈವ ಸಃ । ಕಿಮತ್ರ ಬಹುನೋಕ್ತೇನ**

ನಾಕೃತಂ ಕ್ರಿಯತೇ ಜನೈಃ ॥'' ಎಂದು ಶಾಂಡಿಲ್ಯತತ್ತ್ವ ಹರಿಯ ''ಕರ್ತಾ ಕಾರಯಿತಾ''ವನ್ನು ವಿವರಿಸುತ್ತದೆ.

ಜೀವರ ಅಂತರ್ಯಾಮಿಯಾದ ವಾಯುದೇವರು ಸಕಲ ಚೇತನರು ಮಾಡುವ ಸರ್ವಕರ್ಮಗಳ ಮೇಲೆ ರಮಾನಾರಾಯಣರು ಸರ್ವಪ್ರಕಾರದ ಸ್ವಾಮಿತ್ವವುಳ್ಳವನಾಗಿದ್ದಾರೆ. ಏಕೆಂದರೆ ಸರ್ವಜೀವರು ವಾಯುದೇವರ ಅಧೀನರಾಗಿಯೇ ಸರ್ವಕರ್ಮವನ್ನು ಮಾಡುವವರಾಗಿದ್ದಾರೆ. ಆದಕಾರಣ ವಾಯುದೇವರು ಸರ್ವಕರ್ಮಸ್ವಾಮಿ.

ಜೀವರು ಹರಿ-ವಾಯುಗಳ ಅಧೀನರಾಗಿ ಮಾಡುವ ಸಕಲ ಕರ್ಮಗಳನ್ನು ಅರ್ಪಣೆ ಮಾಡುವವರು ಕೂಡ ಶ್ರೀ ವಾಯುದೇವರೇ ಆಗಿದ್ದಾರೆ. ಜೀವರು ತಾವು ಮಾಡುವ ಕರ್ಮಗಳನ್ನು ಭಾರತೀರಮಣನಿಗೆ ಅರ್ಪಿಸಿದರೆ ಆ ಭಾರತೀರಮಣ ತಾನು ಎಲ್ಲರ ಕರ್ಮಗಳನ್ನು ಶ್ರೀಹರಿಗೆ ಅರ್ಪಿಸುತ್ತಾನೆ.

ಇಂತಹ ವಾಯುದೇವರೇ ಸರ್ವಕರ್ಮಫಲಗಳ ಭೋಕ್ತಾಕೂಡ ಆಗಿದ್ದಾರೆ. ಅಂದರೆ ದೇಹಗತ ಇಂದ್ರಾದಿ ತತ್ವಾಭಿಮಾನಿ ದೇವತೆಗಳು ಇಂದ್ರಿಯಗಳು, ಇಂದ್ರಿಯಗಳಿಂದ ಉಂಟಾಗುವ ಭೋಗದಲ್ಲಿ ಭೋಕ್ತಾರು ಹಾಗೂ ಭೋಜ್ಯರೂ ಆಗಿದ್ದಾರೆ. ಆದರೆ ಈ ಎಲ್ಲಾ ತತ್ವಾಭಿಮಾನಿದೇವತೆಗಳು ಶ್ರೀಹರಿಯ ಅಚಿಂತ್ಯವಾದ ಅದ್ಭುತಶಕ್ತಿಯಿಂದಾಗಿ ಅನಂತಾಂಶಗಳಿಂದ ವಿಭಕ್ತರಾಗಿ ದೇಹೇಂದ್ರಿಯಗಳ ಒಳಗೆ ಇದ್ದು ನಿಯಾಮಕರಾಗಿದ್ದಾರೆ. ಆದ್ದರಿಂದ ಇವರು ಸರ್ವರೀತಿಯಿಂದ ಸರ್ವಕರ್ಮಫಲ ಭೋಕ್ತಾರರು ಭೂಜ್ಯರು ಆಗಿದ್ದಾನೆ. ಈ ತತ್ವಾಭಿಮಾನಿಗಳು ಹರಿಯ ಪ್ರೇರಣೆಯಿಂದಲೇ ಅನುಸಂಧಾನಪೂರ್ವಕವಾಗಿ ಜೀವರಲ್ಲಿ ನಿಂತು ಕರ್ಮಗಳನ್ನು ಮಾಡಿ ಮಾಡಿಸಿ ಹರಿಗರ್ಪಣೆ ಮಾಡುವುದರಿಂದ ಇವರಿಗೆ ಪಾಪಲೇಪದ ಭೋಗವಿಲ್ಲ. ಕೇವಲ ಪೂರ್ಣಸುಖವುಳ್ಳವರಾಗಿದ್ದರೆ. ಇಂತಹ ಎಲ್ಲಾ ತತ್ವಾಭಿಮಾನಿಗಳ ಅಂತರ್ಯಾಮಿಯಾಗಿ ಮುಖ್ಯಪ್ರಾಣನು ಇರುವ ಕಾರಣ ತತ್ವಾಭಿಮಾನಿಗಳು

ಅನುಭವಿಸುವ ಸರ್ವಕರ್ಮಗಳ ಫಲಭೋಕ್ತಾ ಹಾಗೂ ಭೋಜಯಿತ್ರಾ ಶ್ರೀವಾಯುದೇವರೇ ಆಗಿದ್ದಾರೆ. ದುಃಖದ ಭೋಗ ತತ್ವಾಭಿಮಾನಿಗಳಾಗಲಿ ಅಥವಾ ವಾಯುದೇವರಿಗಾಗಲಿ ಇಲ್ಲವೇ ಇಲ್ಲಾ ಎಂದಮೇಲೆ ಸರ್ವಕರ್ಮ ಭೋಕ್ತ್ರ ಎನ್ನುವುದು ಎಷ್ಟು ಸರಿ? ಎಂದರೆ ಶ್ರೀವಾಯುದೇವರು ದುಃಖದ ಭೋಗವು ದೇಹಾಭಿಮಾನಿ ಜೀವನಿಗೆ ಉಂಟಾಗಲಿ ಎಂದು ಹರಿಯ ಸಂಕಲ್ಪದಿಂದ ಇಚ್ಛಿಸಿ ದುಃಖ ಭೋಗ ಜೀವರು ಮಾಡುವುದನ್ನು ವೀಕ್ಷಿಸುವುದೇ ದುಃಖದ ಭೋಗವು ಎಂದಿದ್ದಾರೆ.

ಹೀಗಾಗಿ ಸರ್ವಕರ್ಮಫಲಭೋಕ್ತರಾದ ವಾಯುದೇವರು ಸರ್ವಜೀವರ ಅಂತರ್ಯಾಮಿಯಾಗಿ ಹಾಗೂ ಇಂದ್ರಿಯಾಭಿಮಾನಿಗಳಾದ ದೇವತೆಗಳ ಒಳಗಿದ್ದು ಅವರೆಲ್ಲರಿಗೂ ಭೋಗಶಕ್ತಿಪ್ರದನಾದ ಕಾರಣ ಶ್ರೀವಾಯುದೇವರ ಸರ್ವಕರ್ಮ ಫಲಗಳ ಭೋಕ್ತ್ರ ಹಾಗೂ ಭೂಜಯಿತ್ರಾ ಎನಿಸಿದ್ದಾರೆ.

ಸರ್ವಜೀವರ ಅನಾದಿಕಾಲದ ಸಂಸ್ಕಾರ ಹಾಗೂ ಅದೃಷ್ಟ ಮತ್ತು ಜೀವರ ಸ್ವರೂಪಭೂತವಾದ ಯೋಗ್ಯತೆ ಅರಿವಿರುವವರೇ ಸರ್ವಕರ್ಮ ಪ್ರೇರಿತರಾಗಲು ಸಾಧ್ಯ.

ಈ ಬಗೆ ಅರಿವಿರುವ ವಾಯುದೇವರು ಸಕಲ ಜೀವಜಾತಗಳ ಅಂತರ್ಯಾಮಿಯಾಗಿ ಯಥಾಕಾಲದಲ್ಲಿ ಯಥಾಯೋಗ್ಯವಾದ ಜ್ಞಾನಾದಿಗಳನ್ನು ಕೊಟ್ಟು ಅವರನ್ನು ತನ್ನ ಅಧೀನರನ್ನಾಗಿಸಿ ಅವರಿಂದ ಕರ್ಮಗಳನ್ನು ಮಾಡಿಸುತ್ತಾರೆ.

ಸಜ್ಜನರು ಮಾಡುವ ಸರ್ವಕರ್ಮಗಳನ್ನು ಶುದ್ಧಿ ಮಾಡಿ ಆ ಕರ್ಮಗಳನ್ನು ಶ್ರೀಹರಿಗೆ ಸ್ವತಃ ವಾಯುದೇವರೇ ಸಮರ್ಪಿಸುವವರಾಗಿದ್ದಾರೆ. ನಿಷ್ಕಾಮನೆ ಹಾಗೂ ಅಭಿಮಾನಾದಿಗಳನ್ನು ಬಿಟ್ಟು ಕರ್ಮಗಳನ್ನು ಮಾಡುವಂತೆ ಪ್ರೇರೇಪಿಸುತ್ತಾರೆ. ಈ ಭಾವನೆಯಿಂದ ಮಾಡಿದ ಕರ್ಮಗಳೇ ಅತ್ಯಂತ

ಶುದ್ಧಕರ್ಮಗಳು. ಹೀಗಾಗಿ ಶ್ರೀವಾಯುದೇವರೇ ಸರ್ವಕರ್ಮ ಪ್ರೇರಕರಾಗಿದ್ದಾರೆ. ಕರ್ಮಗಳಿಗೆ ಕಾರಣವಾದ ಪೂರ್ವಸಂಸ್ಕಾರಗಳನ್ನು ಜಾಗೃತಗೊಳಿಸಿ ಅದರ ಪ್ರಕಾರ ಸಕಲ ಜೀವರಿಗೆ ಸರ್ವಕರ್ಮಗಳಲ್ಲಿ ತೊಡಗುವರಂತೆ ಮಾಡುವ ವಾಯುದೇವರು ಸರ್ವಕರ್ಮೋದ್ಬೋಧಕ-ರಾಗಿದ್ದಾರೆ. ಸಕಲ ಜೀವರ ದೇಹ ಹಾಗೂ ಇಂದ್ರಿಯಾಭಿಮಾನಿಗಳ ಒಳಗೆ ಅಂತರ್ಯಾಮಿಯಾಗಿರುವ ವಾಯುದೇವರು ತಮ್ಮನ್ನು ನಂಬಿರುವ ಸಜ್ಜನರು ಮಾಡುವ ಸಕಲ ಕರ್ಮಗಳನ್ನು ಶುದ್ಧಿ ಮಾಡಿ ಹರಿಗೆ ಸ್ವತಃ ಅರ್ಪಿಸುವರಾದ ಕಾರಣ ಶ್ರೀವಾಯುದೇವರೆ ಸರ್ವಕರ್ಮಶುದ್ಧಿಪ್ರದರಾಗಿದ್ದಾರೆ.

ಸಾಮಾನ್ಯವಾಗಿ ಜೀವರು ಅಜ್ಞಾನಾವಸ್ಥೆಯಿಂದಾಗಿ ತಾವು ಮಾಡುವ ಸಕಲಕರ್ಮಗಳು ಜ್ಞಾನದ ಕೊರತೆ ಹಾಗೂ ಅನುಸಂಧಾನದ ಕೊರತೆಯಿಂದಾಗಿ ಅಪೂರ್ಣವಾಗಿರುತ್ತದೆ. ಅಂತಹ ಜೀವರಿಗೆ ಜ್ಞಾನಾದಿಗಳನ್ನು ಕೊಟ್ಟು ಅವರ ಕರ್ಮಗಳು ಪೂರ್ಣವಾಗಿ ಕರ್ಮದ ಫಲ ಒದಗುವಂತೆ ಮಾಡುವ ಮಹಾನುಭಾವರು ಶ್ರೀವಾಯುದೇವರಾದ ಕಾರಣ ಶ್ರೀವಾಯುದೇವರೇ ಸರ್ವಕರ್ಮಫಲ ಸಿದ್ಧಿಪ್ರದರಾಗಿದ್ದಾರೆ. ಶ್ರೀವಾಯುದೇವರು ಯಾವುದೇ ಕರ್ಮವನ್ನು ಮಾಡುವಾಗ ಪೂರ್ಣಶ್ರದ್ಧೆಯಿಂದ ಆಚರಿಸಿ ಹರಿಗೆ ಅರ್ಪಿಸುವ ಕಾರಣ ಅವರೇ ಸರ್ವಕರ್ಮನಿಷ್ಠರಾಗಿದ್ದಾರೆ.

ಸರ್ವಜೀವರು ಮಾಡುವ ಸಕಲ ಕರ್ಮಗಳನ್ನು ಶ್ರೀವಾಯುದೇವರು ಅಂತರ್ಯಾಮಿಯಾಗಿ ನಿಂತು ನೋಡುವವರಾದ ಕಾರಣ ಸರ್ವಕರ್ಮ ಸಾಕ್ಷಿಯಾಗಿದ್ದಾರೆ. ಸಕಲ ಜೀವರು ಮಾಡುವ ಕರ್ಮಗಳಿಗೆ ಶಕ್ತಿಪ್ರದವಾದ ಶ್ರೀಹರಿಯ ರೂಪಗಳನ್ನು ಸದಾ ಉಪಾಸನೆ ಮಾಡುವ ಶ್ರೀವಾಯುದೇವರಿಂದ ಪ್ರೇರಿತನಾಗಿ ಕರ್ಮಗಳನ್ನು ಆಚರಿಸುತ್ತೇನೆ, ಎಂದು ಮುಂದಿನ ಮಾತುಗಳಿಂದ ಅನ್ವಯ ಮಾಡಿಕೊಳ್ಳಬೇಕು.

೨೮. ಅತ ಏವ ಅಶೇಷಜೀವನಿಃಸಂಖ್ಯಾನಾದಿಕಾಲೀನ ಧರ್ಮಾಧರ್ಮ- ದ್ರಷ್ಟ್ರಾ ಸ್ವೇಚ್ಛಯೋದ್ಬೋಧಕೇನ ತದ್ವಾಚಕ ಕಪಿಲೋಪಾಸಕೇನ ರಮಾವ್ಯತಿರಿಕ್ತಪೂರ್ವಪ್ರಸಿದ್ಧ ವ್ಯತಿರಿಕ್ತಾನಂತವೇದಪ್ರತಿಪಾದ್ಯ ಮುಖ್ಯತಮೇನ ಅನಂತಗುಣಪರಿಪೂರ್ಣೇನ ಸರ್ವದೋಷ- ದೂರೇಣ ತ್ವಚ್ಚಿತ್ತಾಭಿಜ್ಞೇನ ತ್ವಚ್ಚಿತ್ತಾನುಸಾರಿಚಿತ್ತೇನ ತ್ವತ್ಪರಮಾ- ನುಗ್ರಹಪಾತ್ರಭೂತೇನ ಮದ್ಯೋಗ್ಯತಾಭಿಜ್ಞೇನ ಶ್ರೀಭಾರತೀ- ರಮಣೇನ ರುದ್ರಾದ್ಯಶೇಷತಾತ್ತ್ವಿಕದೇವತೋಪಾಸಿತಚರಣೇನ ಮಮ ಸರ್ವಾಸ್ವವಸ್ಥಾಸು ಚಿತ್ರಧಾ ವಿಚಿತ್ರಧಾ ತ್ವದುಪಾಸಕೇನ ಶ್ರೀಮುಖ್ಯಪ್ರಾಣೇನ ಪ್ರೇರಿತಃ ಸನ್....

ಪ್ರತಿಪದಾರ್ಥ :- ಅತ ಏವ–ಆದುದರಿಂದಲೇನೆ, ಅಶೇಷ ಜೀವ ನಿಃಸಂಖ್ಯಾನಾದಿ ಕಾಲೀನ–ಸಕಲ ಜೀವಜಾತಗಳ, ಅಸಂಖ್ಯವೂ ಹಾಗೂ ಅನಾದಿಯೂ ಆದ, ಧರ್ಮಾಧರ್ಮದ್ರಷ್ಟ್ರಾ ಸ್ವೇಚ್ಛೇಯೋದ್ಬೋಧಕೇನ– ಪುಣ್ಯಪಾಪಗಳನ್ನು ಬಲ್ಲವರಾಗಿ ಸ್ವೇಚ್ಛಾನುಸಾರವಾಗಿ ಕರ್ಮಗಳನ್ನು ಪ್ರೇರಿಸುವವರಾದ, ತದ್ವಾಚಕ ಕಪಿಲೋಪಾಸಕೇನ–ಹೀಗೆ ಅರ್ಥವನ್ನು ಹೇಳುವ ಕಪಿಲನೆಂಬ ಹೆಸರಿನ ಶ್ರೀಹರಿಯನ್ನು ಉಪಾಸಿಸುವ, ರಮಾವ್ಯತಿರಿಕ್ತ ಪೂರ್ವಪ್ರಸಿದ್ಧ ವ್ಯತಿರಿಕ್ತ–ರಮಾದೇವಿಯಲ್ಲಿಯೇ ಪ್ರಸಿದ್ಧವಾದ ಹಾಗೂ ಅನಾದಿಯಾಗಿ ಪ್ರಸಿದ್ಧವಾದ ಶಬ್ದಗಳಿಂದ ಭಿನ್ನವಾದ, ಅನಂತ ವೇದ ಪ್ರತಿಪಾದ್ಯ–ಅನಂತವಾದ ವೇದಗಳಿಂದ ಪ್ರತಿಪಾದ್ಯರಾದ ದೇವತೆಗಳಲ್ಲಿ, ಮುಖ್ಯತಮೇನ–ಮುಖ್ಯತಮರಾದ, ಅನಂತ ಗುಣಪರಿಪೂರ್ಣೇನ–ಅನಂತ-ಗುಣಗಳಿಂದ ಪರಿಪೂರ್ಣನಾದ, ಸರ್ವದೋಷ- ದೂರೇಣ – ಸರ್ವದೋಷಗಳಿಂದಲೂ ದೂರನಾದ, ತ್ವಚ್ಚಿತ್ತಾಭಿಜ್ಞೇನ–ನಿನ್ನ ಸಂಕಲ್ಪವನ್ನು ತಿಳಿದವರಾದ, ತ್ವಚ್ಚಿತ್ತಾನುಸಾರಿ ಚಿತ್ತೇನ–ನಿನ್ನ ಚಿತ್ತಾನುಸಾರವಾದ ಚಿತ್ತವುಳ್ಳವರಾದ, ತ್ವತ್ಪರಮಾನುಗ್ರಹ ಭೂತೇನ–ನಿನ್ನ ಪರಮ ಪ್ರೀತಿಗೆ ಪಾತ್ರರಾದ, ಮದ್ಯೋಗ್ಯತಾಭಿಜ್ಞೇನ–ನನ್ನ ಯೋಗ್ಯತೆಯನ್ನು ಚೆನ್ನಾಗಿ ತಿಳಿದವರಾದ, ಭಾರತೀರಮಣೇನ–ಭಾರತೀಪತಿಯು, ರುದ್ರಾದಿ–ರುದ್ರದೇವರೇ ಮೊದಲಾದ, ಅಶೇಷ–ಸಕಲ, ತಾತ್ತ್ವಿಕ ದೇವತೋಪಾಸಿತ ಚರಣೇನ–ತತ್ವಾಭಿಮಾನಿ ದೇವತೆಗಳಿಂದ

ಉಪಾಸಿಸಲ್ಪಡುವ ಪಾದಗಳುಳ್ಳವನಾದ, ಮಮ–ನನ್ನ ಸರ್ವಾಸ್ವವಸ್ಥಾಸು, ಎಲ್ಲಾ ಜಾಗ್ರದಾದಿ ಅವಸ್ಥೆಗಳಲ್ಲಿ, ಚಿತ್ರದಾ ವಿಚಿತ್ರಧಾ–ಚಿತ್ರವಿಚಿತ್ರಪ್ರಕಾರಗಳಿಂದ, ತ್ವದುಪಾಸಕೇನ–ನಿನ್ನನ್ನು ಉಪಾಸಿಸುವವನಾದ, ಶ್ರೀಮುಖ್ಯಪ್ರಾಣೇನ – ಶ್ರೀಮುಖ್ಯಪ್ರಾಣನಿಂದ, ಪ್ರೇರಿತಃಸನ್– ಪ್ರೇರೇಪಿಸಲ್ಪಟ್ಟವನಾಗಿ....

**ತಾತ್ಪರ್ಯ** :- ಶ್ರೀವಾಯುದೇವರು ಈ ಬಗೆಯ ಉಪಾಸನಾ- ಬಲದಿಂದಲೇನೇ ಸಮಸ್ತ ಜೀವರಾಶಿಗಳು ಮಾಡುವ ಅಸಂಖ್ಯವಾದ ಹಾಗೂ ಅನಾದಿಕಾಲದ ಧರ್ಮಾಧರ್ಮಗಳನ್ನು ತಿಳಿದು ಅದರಂತೆ ಆಯಾಯ ಜೀವರಾಶಿಗೆ ಆಯಾಯ ಕಾಲದಲ್ಲಿ ಬುದ್ಧಿಯನ್ನು ಪ್ರೇರೇಪಿಸುತ್ತಾರೆ. ಇಲ್ಲಿ ಧರ್ಮವೆಂದರೆ ಪುಣ್ಯ ಕಾಲಾಂತರದಲ್ಲಿ ಅಥವಾ ಯಾವುದೋ ಜನ್ಮದಲ್ಲಿ ಸುಖಪ್ರಾಪ್ತಿಗಾಗಿ ಕಾರಣವಾಗುವ ಅದೃಷ್ಟಕರ್ಮವಿಶೇಷವೇ ಪುಣ್ಯವಿಶೇಷವು. ಅಧರ್ಮವೆಂದರೆ ಇದರ ವಿರುದ್ಧವಾದ ಕರ್ಮವಿಶೇಷ. ಕೆಟ್ಟ ಕರ್ಮಗಳಿಂದ ಮುಂದೆ ಎಂದೂ ದುಃಖಪ್ರಾಪ್ತಿಗೆ ಕಾರಣವಾಗುವ ದುಃಖ ವಿಶೇಷವೇ ಪಾಪವು. ಆದರೆ ಧರ್ಮವಾಗಲಿ ಅಥವಾ ಅಧರ್ಮವಾಗಲಿ ಇಂದ್ರಿಯಗಳಿಗೆ ಗೋಚರವಾಗುವುದಿಲ್ಲಾ ಎಂಬ ಕಾರಣದಿಂದ ತಿರಸ್ಕಾರ ಮಾಡುವಂತಿಲ್ಲಾ. ಆದರೆ ಇಂದು ನಾವು ಆಚರಿಸುವ ಧರ್ಮಾಧರ್ಮಗಳು ಕಾಲಾಂತರದಲ್ಲಿ ಫಲವನ್ನು ಕೊಡುವುದು ಲೌಕಿಕಾನುಭವದಿಂದ ಸಿದ್ಧಿಯಾಗಿದೆ. ಯಾವ ಕರ್ಮವು ಕೂಡ ಮಾಡಿದ ಕ್ಷಣದಲ್ಲೇ ಫಲವನ್ನು ಕೊಡುವುದಿಲ್ಲಾ. ಪ್ರತಿಯೊಬ್ಬ ಜೀವನು ಸಾವಿರಸಾವಿರ ಜನ್ಮಗಳನ್ನು ಕರ್ಮದ ಫಲವಾಗಿ ಪಡೆಯುತ್ತಾನೆ. ಆ ಎಲ್ಲಾ ಜನ್ಮಗಳಲ್ಲಿ ಮತ್ತೆ ಮತ್ತೆ ಧರ್ಮಾಧರ್ಮ ಆಚರಣೆಯಿಂದ ಪುಣ್ಯ ಹಾಗೂ ಪಾಪಗಳನ್ನು ಪಡೆಯುತ್ತಾನೆ. ಹಾಗೆ ಸಾವಿರ ಸಾವಿರ ಜನ್ಮಗಳಲ್ಲಿ ಮಾಡಿದ ಧರ್ಮಾಧರ್ಮರೂಪದ ಕಾಣದ ಕರ್ಮವಿಶೇಷಗಳು ಹಾಗೂ ಮನದೊಳಗಿನ ಸೂಕ್ಷ್ಮರೂಪದ ಸಂಸ್ಕಾರಗಳು ಅನಂತವಾಗಿವೆ. ಈ ಎಲ್ಲಾ ಬಗೆಯ ಧರ್ಮಾಧರ್ಮಗಳು ಸೂಕ್ಷ್ಮಮನೋರೂಪದ ಸಂಸ್ಕಾರಗಳ ಅರಿವು ವಾಯುದೇವರಿಗೆ ಮಾತ್ರ ಇರುತ್ತದೆ. ಅಂತಹ ಸಂಸ್ಕಾರಗಳಲ್ಲಿ ಯಾವುದನ್ನು

ಯಾವ ಕಾಲದಲ್ಲಿ ಜೀವನ ಅನುಭವಕ್ಕೆ ಕೂಡಬೇಕೆಂದು ತಿಳಿದು ಆಯಾಯ ಕರ್ಮಗಳಲ್ಲಿ ಜೀವರನ್ನು ತೊಡಗಿಸಬೇಕೆಂದು ನಿರ್ಣಯಿಸಿ ಜೀವನನ್ನು ಪ್ರೇರಿಸುತ್ತಾರೆ. ಇದು ಸಾಮಾನ್ಯವಾದ ವಿಷಯವೇನಲ್ಲಾ. ಈ ಎಲ್ಲ ಬಗೆಯ ಪ್ರೇರಣೆಯನ್ನು ಶ್ರೀಹರಿಯೇ ಮುಖ್ಯವಾಗಿ ಮಾಡಿದರೂ ಸ್ವಾಮಿಯ ಅನುಗ್ರಹಬಲವಿಶೇಷದಿಂದ ವಾಯುದೇವರು ಸತ್ಯಸಂಕಲ್ಪನಾದ ಶ್ರೀಹರಿಯ ಸಂಕಲ್ಪ ತಿಳಿದು ಹರಿಯ ಅಧೀನನಾಗಿ ಶ್ರೀವಾಯುದೇವರು ಪ್ರತಿಯೊಬ್ಬ ಜೀವನಿಗೂ ಕರ್ಮಗಳಲ್ಲಿ ಪ್ರೇರೇಪಣೆ ಮಾಡುವವರಾಗಿದ್ದಾರೆ.

ತದ್ವಾಚಕ ಕಪಿಲೋಪಾಸಕರು ಶ್ರೀವಾಯುದೇವರು. ಇಲ್ಲಿ ನಾವು ತಿಳಿಯಬೇಕಾದ ಪ್ರಮೇಯವೆಂದರೆ ಸುಖರೂಪನು ಹಾಗೂ ಜಗದ್ರಕ್ಷನೂ ಆದಕಾರಣ ಶ್ರೀಹರಿಯು ಕಪಿಯು, ಅಲ್ಲದೆ 'ಲಾ' ದಾನೆ (ಸುಖ ಹಾಗೂ ರಕ್ಷಣೆ) ಕೊಡುವವನು ಆಗಿದ್ದಾನೆ. ಕಂ ಪಿಬತಿ ಲಾ ತಿ ಇತಿ ಕಪಿಲ, ಹರಿಯ ಅನುಗ್ರಹ ವಿಶೇಷದಿಂದಾಗಿ ಶ್ರೀವಾಯುದೇವರ ಸುಖಸ್ವರೂಪಿಗಳು ಹಾಗೂ ಹರಿಯ ಆಜ್ಞಾನುಸಾರ ಜಗತ್ತಿನ ರಕ್ಷಕರು ಆಗಿದ್ದಾರೆ. ರಕ್ಷಣೆ ಮಾಡುವಿಕೆ ಹಾಗೂ ಸುಖವನ್ನು ನೀಡುವವನು ಶ್ರೀಹರಿಯೇ ಎಂದು ತಿಳಿದು ಕಪಿಲನಾಮಕ ಹರಿಯನ್ನು ಉಪಾಸನೆ ಮಾಡುವ ಮಹಾನುಭಾವರು ಶ್ರೀವಾಯು ದೇವರಾಗಿದ್ದಾರೆ.

ಅನಂತ ವೇದಗಳೂ ಕೂಡ ಪರಮವೃತ್ತಿಯಿಂದ ಶ್ರೀಹರಿಯನ್ನು ತಿಳಿಸುತ್ತದೆ. ಅದರಲ್ಲಿ ನಾರಾಯಣನಲ್ಲಿ ಮಾತ್ರವೇ ಪ್ರಸಿದ್ಧವಾದ ಅನ್ಯವಾಚಕವಲ್ಲದ ನಾರಾಯಣಾದಿ ಕೆಲವು ಶಬ್ದಗಳನ್ನು ಹೊರತುಪಡಿಸಿ, ಉಳಿದೆಲ್ಲಾ ಅನಂತವೇದರಾಶಿಗಳು ಶ್ರೀರಮೆಯನ್ನು ಪ್ರತಿಪಾದಿಸುತ್ತದೆ. ಇಂತಹ ರಮೆಯನ್ನು ಬಿಟ್ಟು ವೇದಪ್ರತಿಪಾದ್ಯರಾದ ಇತರ ದೇವತೆಗಳ ಮಧ್ಯದಲ್ಲಿ ಶ್ರೀವಾಯುದೇವರು ಅತ್ಯಂತ ಪ್ರಸಿದ್ಧರು. ರಮೆ ಹಾಗೂ ನಾರಾಯಣರೆಲ್ಲಿ ಪ್ರಸಿದ್ಧವಾದ ಕೆಲವು ಶಬ್ಧಗಳನ್ನು ಹೊರತುಪಡಿಸಿ ಉಳಿದ ಸಮಸ್ತ ವೇದಪ್ರತಿಪಾದ್ಯರು ಶ್ರೀವಾಯುದೇವರು. ಹೀಗೆ ಸಕಲ ವೇದಪ್ರತಿಪಾದ್ಯನಾಗಿರುವ ಕಾರಣ ಶ್ರೀವಾಯುದೇವರು ಅನಂತಗುಣಪೂರ್ಣರಾಗಿದ್ದಾರೆ. ರಮಾ ಹಾಗೂ

ನಾರಾಯಣರಂತೆ ಅನಂತ ಗುಣಪರಿಪೂರ್ಣರಲ್ಲದಿದ್ದರೂ, ಜೀವಕೋಟಿಗಳ ಮಧ್ಯದಲ್ಲಿ ಶ್ರೀವಾಯುದೇವರು ಅನಂತಗುಣಪೂರ್ಣರಾಗಿದ್ದಾರೆ. ಇಂತಹ ವಾಯುದೇವರು ದುಃಖ, ಅಜ್ಞಾನ ಇವೇ ಮೊದಲಾದ ದೋಷದಿಂದ ದೂರರಾಗಿದ್ದಾರೆ. ರುದ್ರಾದಿ ಇತರ ಜೀವರಲ್ಲಿ ದೋಷಗಳಿಗೆ ಪ್ರಸಕ್ತಿ ಇದೆ. ಅಮುಕ್ತಜೀವರಾಶಿಗಳಲ್ಲಿ ಇವರಂತೆ ದೋಷದೂರರು ಯಾರೂ ಇಲ್ಲಾ.

ಆಯಾಯಾ ಕಾಲಗಳಲ್ಲಿ ಹರಿಯ ಸಂಕಲ್ಪವನ್ನು ತಿಳಿದವರೂ ಶ್ರೀವಾಯುದೇವರು, ಹರಿಯ ಚಿತ್ತಾನುಸಾರಿಯಾಗಿ ಚಿತ್ತವುಳ್ಳವರು ಶ್ರೀವಾಯುದೇವರು. ಹರಿಯ ಪರಮಾನುಗ್ರಹಕ್ಕೆ ಮುಖ್ಯಪಾತ್ರಭೂತರಾದವರು ಶ್ರೀವಾಯುದೇವರು. ಜೀವನ ಯೋಗ್ಯತೆಯನ್ನು ಚೆನ್ನಾಗಿ ಬಲ್ಲವರು ಶ್ರೀವಾಯುದೇವರು, ಭಾರತೀಪತಿಯಾದವರು ರುದ್ರಾದಿ ಅಶೇಷ ತಾತ್ವಿಕ ದೇವತೆಗಳಿಂದ ಉಪಾಸನೆ ಮಾಡುವುದಕ್ಕೆ ಯೋಗ್ಯವಾದ ಪಾದವುಳ್ಳವರು, ನನ್ನ ಎಲ್ಲಾ ಅವಸ್ಥೆ ಅಂದರೆ ಜಾಗೃತಸ್ವಪ್ನ ಸುಶುಪ್ತಿ ಈ ಅವಸ್ಥೆಗಳ ನಿಯಾಮಕರು ಶ್ರೀ ವಾಯುದೇವರು. ವಿಶ್ವ ತೈಜಸ ಪ್ರಾಜ್ಞ ಎಂಬ ಹರಿಯ ರೂಪಗಳು ಅವಸ್ಥಾತ್ರಯ ನಿಯಾಮಕಗಳು ಆಗಿದ್ದರೂ ಸಹ ಈ ಹರಿಯ ರೂಪದೊಂದಿಗೆ ಶ್ರೀವಾಯುದೇವರು ಇದ್ದು ಅವಸ್ಥಾತ್ರಯಗಳನ್ನು ತಾವೇ ನಿಯಮಿಸುತ್ತಾ ಶ್ರೀಹರಿಯ ಕಾರ್ಯಸಾಧಕರೆನಿಸಿದ್ದಾರೆ. ಈ ಮೂರು ಅವಸ್ಥೆಗಳಲ್ಲಿ ಶ್ರೀಹರಿಯನ್ನು ಶ್ರೀವಾಯುದೇವರು ಚಿತ್ರವಿಚಿತ್ರವಾಗಿ ಸೇವೆ ಮಾಡುವ ಮಹಾಭಾಗ್ಯಶಾಲಿಗಳೇ ಆದ ಶ್ರೀವಾಯುದೇವರಿಂದ ಪ್ರೇರಿತನಾದ ನಾನು ಸಕಲ ಕರ್ಮವನ್ನು ಮಾಡುತ್ತೇನೆ ಎಂದು ಮುಂದಿನ ವಾಕ್ಯದಿಂದ ಸಮನ್ವಯವನ್ನು ಕಾಣಬಹುದು.

೨೯. **ತ್ವತ್ಸಂಸ್ಮೃತಿಪೂರ್ವಕಂ ಶಯನಾತ್ ಸಮುತ್ಥಾಯಾದ್ಯತನಂ ಸ್ವವರ್ಣಾಶ್ರಮೋಚಿತಂ ದೇಶಕಾಲಾವಸ್ಥೋಚಿತಂ ನಿತ್ಯನೈಮಿತ್ತಿಕ ಕಾಮ್ಯಭೇದೇನ ತ್ರಿವಿಧಂ ತ್ವತ್ಪೂಜಾತ್ಮಕಂ ಕರ್ಮ ಯಥಾಶಕ್ತಿ ಯಥಾಜ್ಞಪ್ತಿ ಯಥಾವೈಭವಂ ಕರಿಷ್ಯೇ ಮದಾಜ್ಞಾಕಾರಿ-**

**ಭಿರ್ವಿದ್ಯಾಸಂಬಂಧಿಭಿರ್ದೇಹಸಂಬಂಧಿಭಿಶ್ಚ ತ್ವದೀಯೈರ-ಶೇಷೈರ್ಜನೈಸ್ತ್ವತ್ಸರ್ವ ಕರ್ಮಕರ್ತೃತ್ವಕಾರಯಿತೃತ್ವಾದ್ಯನು-ಸಂಧಾನಪೂರ್ವಕಂ ಕಾರಯಿಷ್ಯೇ ಚ ॥**

**ಪ್ರತಿಪದಾರ್ಥ :-** ತತ್ಸಂಸ್ಮೃತಿ ಪೂರ್ವಕಂ–ನಿನ್ನ ಸ್ಮರಣೆಯೊಂದಿಗೆ, ಶಯನಾತ್– ಹಾಸಿಗೆಯಿಂದ, ಸಮುತ್ಥಾಯ–ಎಚ್ಚರಗೊಂಡು ಮೇಲೆದ್ದು ಅದ್ಯತನಂ–ಈ ದಿನವೆಲ್ಲಾ, ಸ್ವವರ್ಣಾಶ್ರಮೋಚಿತಂ–ನನ್ನ ವರ್ಣ ಹಾಗೂ ಆಶ್ರಮೋಚಿತವಾದ, ದೇಶಕಾಲ- ವಸ್ಥೋಚಿತಂ–ದೇಶ ಕಾಲ ಅವಸ್ಥೆಗಳಿಗೆ ಉಚಿತವಾದ, ನಿತ್ಯ ನೈಮಿತ್ತಿಕ–ನಿತ್ಯ ಹಾಗೂ ನೈಮಿತ್ತಿಕ, ಕಾಮ್ಯ ಭೇದೇನ–ಕಾಮ್ಯ ಎಂಬ ಭೇದಗಳಿಂದ ಕೂಡಿದ, ತ್ರಿವಿಧಂ–ಮುಬ್ಬಗೆಯಾಗಿರುವ, ತ್ವತ್ಪೂಜಾತ್ಮಕಂ–ನಿನ್ನ ಪೂಜಾರೂಪವೇ ಆದ, ಕರ್ಮ–ಕರ್ಮಗಳನ್ನು, ಯಥಾಶಕ್ತಿ–ನನ್ನ ಶಕ್ತಿ ಇದ್ದಷ್ಟು ಯಥಾಜ್ಞಪ್ತಿ–ಜ್ಞಾನವಿರುವಷ್ಟು, ಯಥಾವೈಭವಂ–ಸಂಪತ್ತಿಗನುಸಾರವಾಗಿ, ಕರಿಷ್ಯೇ–ಮಾಡುತ್ತೇನೆ, ಮದಾಜ್ಞಾಕಾರಿಭಿಃ– ನನ್ನ ಮಾತನ್ನು ಕೇಳವವರಿಂದಲೂ, ವಿದ್ಯಾಸಂಬಂಧಿಭಿಃ–ನನ್ನ ಶಿಷ್ಯರಿಂದಲೂ, ದೇಹ ಸಂಬಂಧಿಬಿಶ್ಚ–ಹಾಗೂ ದೇಹ ನಿಮಿತ್ತ ಸಂಬಂಧವುಳ್ಳವರಿಂದಲೂ, ತ್ವದೀಯೈಃ– ನಿನ್ನವರಾದ, ಅಶೇಷೈಃ ಜನ್ಯೈಃ–ಸಮಸ್ತ ಜನರಿಂದಲೂ, ತ್ವತ್ಸರ್ವಕರ್ತೃತ್ವಕಾರಯಿತೃತ್ವಾದನುಸಂಧಾನ ಪೂರ್ವಕಂ–ನೀನೇ ಸಕಲವನ್ನು ಮಾಡುವವನು, ಸರ್ವರಿಂದ ಮಾಡಿಸುವವನೆಂಬ ಅನುಸಂಧಾನಪೂರ್ವಕವಾಗಿ, ಕಾರಯಿಷ್ಯಾ–ಮಾಡಿಸುತ್ತೇನೆ. ಚ–ನಾನು ಮಾಡುವುದಲ್ಲದೇ.....

**ತಾತ್ಪರ್ಯ :-** ಶ್ರೀಮದಾಚಾರ್ಯರು ತಮ್ಮ ಸದಾಚಾರಸ್ಮೃತಿಯಲ್ಲಿ ತಿಳಿಸುತ್ತಾ **"ಸ್ಮೃತ್ವಾ ವಿಷ್ಣು ಸಮುತ್ಥಾಯಿ"** ಎಂದು ಅಪ್ಪಣೆ ಮಾಡಿದ್ದಾರೆ. ಈ ವಿಷಯವನ್ನೇ ತಿಳಿಸುತ್ತಾ ಎಚ್ಚರವಾದ ತತ್ಕ್ಷಣವೇ ನಮ್ಮ ಮನದ ವ್ಯಾಪಾರವು ಹರಿಯ ಸ್ಮರಣೆಯಾಗಿರಬೇಕೆಂದು ಸೂಚಿಸುತ್ತಾರೆ. ಹರಿಯ ಸ್ಮರಣೆಯೊಂದಿಗೆ ಹಾಸಿಗೆಯಿಂದೇಳಬೇಕು.

ದೇಹೇಂದ್ರಿಯಾದಿಗಳಿಂದ ನಡೆಯುವ ಸಕಲಕರ್ಮಗಳು ಶ್ರೀಹರಿ ಪೂಜಾರೂಪ ಅನುಸಂಧಾನವಿರಬೇಕು. ಈ ರೀತಿಯ ಅನುಸಂಧಾನವು ಉತ್ತಮ ಜ್ಞಾನಿಗಳಿಗೆ ಮಾತ್ರ ಸಿದ್ಧಿಸಿರುತ್ತದೆ. ಅಪರೋಕ್ಷಜ್ಞಾನಕ್ಕೆ ಮೊದಲು, ಅಂತಃಕರಣ ಶುದ್ಧಿದ್ವಾರ ವರ್ಣಾಶ್ರಮೋಚಿತವಾದ ಕರ್ಮಗಳನ್ನು ವಿದಿವತ್ ಆಚರಿಸಬೇಕು. ಆದ್ದರಿಂದಲೇ ಅಪರೋಕ್ಷಜ್ಞಾನವಾಗುವುದು. ಈ ಕರ್ಮಾಚರಣೆಯನ್ನು ಹರಿಯ ಪೂಜಾನುಸಂಧನಾದಿಂದ ಆಚರಿಸಬೇಕು. ಅದನ್ನೇ ಆಚಾರ್ಯರು **''ಸ್ವವಿಹಿತ ವೃತ್ಯಾ ಭಕ್ತ್ಯಾ ಭಗವದಾರಾದನಮೈವ ಪರಮೋ ಧರ್ಮಃ''** ಎಂದಿದ್ದಾರೆ. ವಿಹಿತಕರ್ಮಗಳನ್ನು ಹರಿಪ್ರೀತಿಗಾಗಿ ಆಚರಿಸಿ ನಿಷಿದ್ಧಕರ್ಮಗಳನ್ನು ಹರಿಪ್ರೀತಿಗಾಗಿ ತ್ಯಜಿಸಿ, ಮಾಡಿದ ಸಕಲಕರ್ಮಗಳನ್ನು ಶ್ರೀಹರಿಗೆ ಅರ್ಪಿಸುವುದೇ ಪೂಜೆಯೆನಿಸುತ್ತದೆ. ದಾಸರಾಯರು ಕೂಡ **''ಪರಿ ಪರಿ ಕೆಲಸವು ನಿನ್ನ ಮಹಾಪೂಜೆ''** ಎಂದಿದ್ದಾರೆ. ಹರಿಯ ಒಲುಮೆ ಪಡೆಯಲು ಇದಕ್ಕಿಂತಲೂ ಸುಲಭವಾದ ಇನ್ನೊಂದು ಉಪಾಯವಿಲ್ಲ. ಜಗನ್ನಾಥದಾಸರು **''ಸರ್ವಸಮರ್ಪಣೆಯೇ ಸದುಪಾಯ''** ಎಂದಿದ್ದಾರೆ.

ಭಿನ್ನವರ್ಣ ಭಿನ್ನ ಆಶ್ರಮಗಳಿಗೆ ಭಿನ್ನ ಭಿನ್ನವಾದ ಕರ್ಮಗಳು ಇದೆ. ಅವುಗಳನ್ನು ನಿತ್ಯ-ನೈಮಿತ್ತಿಕ ಹಾಗೂ ಕಾಮ್ಯವೆಂಬುದಾಗಿ ಮೂರು ಭಾಗವನ್ನಾಗಿ ಮಾಡಿದ್ದಾರೆ. ಸ್ನಾನ, ಸಂಧ್ಯಾವಂದನೆ, ದೇವರ ಪೂಜೆ, ಬ್ರಹ್ಮಯಜ್ಞ ಇವೇ ಮೊದಾಲದವುಗಳು **ನಿತ್ಯಕರ್ಮಗಳು.** ಇವುಗಳ ಆಚರಣೆಯಿಂದ ಪುಣ್ಯವಿಲ್ಲದಿದ್ದರೂ ಬಿಟ್ಟರೇ ಪಾಪವು ಮಾತ್ರ ಕಟ್ಟಿಟ್ಟಬುತ್ತಿ. ಗ್ರಹಣಕಾಲದಲ್ಲಿ ಆಚರಿಸುವ ದಾನ, ತರ್ಪಣ, ಹೋಮಾದಿಗಳು **ನೈಮಿತ್ತಿಕ** ಕರ್ಮಗಳು. ಇವುಗಳನ್ನು ಕಾಲವಿಶೇಷಗಳಲ್ಲಿ ಮಾತ್ರ ಆಚರಿಸುತ್ತಾರೆ. ನಿರ್ಧಿಷ್ಟವಾದ ಫಲಗಳನ್ನು ಬಯಸಿ ಮಾಡುವ ಕರ್ಮಗಳೇ **ಕಾಮ್ಯಕರ್ಮಗಳು.** ಪುತ್ರಕಾಮೇಷ್ಠಿ ಸ್ವರ್ಗಕಾಮನೆಯಾಗ, ನಾಗಪ್ರತಿಷ್ಠೆ ಮುಂತಾದವುಗಳ ಕಾಮ್ಯಕರ್ಮಗಳು. ಕರ್ಮವು ಕರ್ತೃವಿನ ಮನೋಭಾವನೆಯನ್ನು ಅನುಸರಿಸಿ ಸಕಾಮ ಅಥವಾ ನಿಷ್ಕಾಮವಾಗಬಹುದು. ಆದರೆ ಸಕಾಮವಾಗಲಿ ನಿಷ್ಕಾಮವಾಗಲಿ ಅದನ್ನು ಹರಿಪ್ರೀತಿಗಾಗಿಯೇ ಆಚರಿಸಬೇಕು.

ಇಂತಹ ಮೂರು ರೀತಿಯ ಕರ್ಮದ ಆಚರಣೆಗೆ ತೊಡಗುವಾಗ ಶಕ್ತಿ-ಬುದ್ಧಿ-ಸಂಪತ್ತು ಅರಿತು ತೊಡಗಬೇಕು. ದೇಹಶಕ್ತಿ ಇಲ್ಲದೆ ವ್ಯಕ್ತಿ ದೇಹಬಲದಿಂದಾಗುವ ತೀರ್ಥಯಾತ್ರದಿಗಳ ಪ್ರಯತ್ನ ಮಾಡಬಾರದು. ಮತ್ತು ಬುದ್ಧಿಶಕ್ತಿಗೆ ಅನುಗುಣವಾಗಿ ಶ್ರೀಹರಿಯ ಧ್ಯಾನದಲ್ಲಿ ತೊಡಗಬೇಕು. ದ್ರವ್ಯಾನುಕೂಲ ತಿಳಿದು ಹರಿಯ ಪೂಜಾದಿಗಳು ವೈಭವೀಕರಿಸಬೇಕು. ಆಡಂಬರಕ್ಕಾಗಿ ಶಕ್ತಿಮೀರಿ ಐಶ್ವರ್ಯಾದಿಗಳ ವಿನಿಯೋಗವು ಹರಿಪ್ರೀತಿಕರವಲ್ಲವೆಂದು ತಿಳಿಸುತ್ತಾ ಹರಿಯಿಂದ ದತ್ತವಾದ ಸಿರಿಸಂಪದವನ್ನು ಹರಿಪ್ರೀತಿಗಾಗಿ ಯಥಾಯೋಗ್ಯವಾಗಿ ಯಥಾಕಾಲದಲ್ಲಿ ಶ್ರೀಹರಿಯ ಅಧಿಷ್ಠಾನಗಳಲ್ಲಿ ಸಮರ್ಪಿಸುವುದು ನಿಜವಾದ ಶ್ರೀಹರಿಯ ಪ್ರೀತಿಗೆ ಕಾರಣವಾಗುತ್ತದೆ. ಅಲ್ಲದೆ ಅದೇ ಹರಿಯ ಪೂಜೆಯು ಆಗುತ್ತದೆ.

ಈ ಬಗೆಯ ಪೂಜೆಯನ್ನು ನಾನು ಮಾತ್ರ ಮಾಡುವುದಲ್ಲಾ, ಕಿಂತು ನನ್ನ ಆಜ್ಞಾವರ್ತಿಗಳಿಂದಲೂ, ವಿದ್ಯೆ ಕೇಳಿದ ಶಿಷ್ಯಜನರಿಂದಲೂ, ದೇಹನಿಮಿತ್ತ ಸಂಬಂಧ ಇರುವ ಸಂಬಂಧೀ ಜನರಿಂದಲೂ ಹರಿಯಲ್ಲಿ ಭಕ್ತಿ ಇರುವ ಅಶೇಷ ಜನರಿಂದಲೂ ನೀನೇ ಸರ್ವಕರ್ತನೂ ನೀನೇ ಎಲ್ಲರಿಂದಲೂ ಎಲ್ಲವನ್ನು ಮಾಡಿಸುವವನೆಂದೂ, ಎಂಬ ಇವೇ ಮೊದಲಾದ ಅನುಸಂಧಾನದಿಂದ ಮಾಡಿಸುತ್ತೇನೆ ಹಾಗೂ ಮಾಡುತ್ತೇನೆ.

ಇತಿ ಶ್ರೀರಾಘವೇಂದ್ರಾಖ್ಯಯತಿನಾ ಕೃತಮಂಜಸಾ ।
ಪ್ರಾತಃಸಂಕಲ್ಪಗದ್ಯಂ ಸ್ಯಾತ್ ಪ್ರೀತ್ಯೈ ಮಾಧವಮಧ್ವಯೋಃ ॥
॥ ಇತಿ ಶ್ರೀಮದ್ರಾಘವೇಂದ್ರಯತಿಶಿರೋಮಣಿಭಿರ್ವಿರಚಿತಂ
ಪ್ರಾತಃಸಂಕಲ್ಪಗದ್ಯಂ ಸಮಾಪ್ತಮ್ ॥

ಹೀಗೆ ರಾಘವೇಂದ್ರತೀರ್ಥರೆಂದು ಅಭಿದಾನವುಳ್ಳ ಯತಿಯಿಂದ ಭಕ್ತಿಪುರಸ್ಸರವಾಗಿ ರಚಿಸಲ್ಪಟ್ಟ ಪ್ರಾತಃಕಾಲದಲ್ಲಿ ಎಲ್ಲರೂ ಪಠಿಸಬೇಕಾದ ಗದ್ಯರೂಪದ ಸಂಕಲ್ಪವು ಶ್ರೀಹರಿವಾಯುಗಳ ಪ್ರೀತಿಕಾರಣವಾಗಲಿ.

